ಬಾಳಬೆಳಕು ಸಾಹಿತ್ಯಮಾಲೆ–ಕಿರಣ ೩೭.

# ಹೆಳವನಕಟ್ಟೆ ಸಂತ ಗಿರಿಯಮ್ಮ

## ಕೀರ್ತನ ಸಾಹಿತ್ಯ





ಲೇಖಕ:
ತಿರುಕ.



ಪ್ರಕಾಶಕರು:
ಅನಾಥ ಸೇವಾಶ್ರಮ,
ಮಲ್ಲಾಡಿಹಳ್ಳಿ ಪೋಸ್ಟ್, ಹೊಳಲ್ಕೆರೆ ತಾಲ್ಲೂಕು.




# ನಿವೇದನೆ

ಪ್ರಿಯ ಬಂಧುಗಳೇ—

ನನ್ನ ಕೀರ್ತನಸಾಹಿತ್ಯದ ಹೂಗೊಂಚಲಿಗೆ ಈ "**ಹೆಳವನಕಟ್ಟೆ ಸಂತ ಗಿರಿಯಮ್ಮ**" ಎಂಬ ಹೊಸ ಹೂ ಒಂದನ್ನು ಸೇರಿಸಿ ತಮ್ಮ ಮಡಿಲಲ್ಲಿಡುತ್ತಿದ್ದೇನೆ. ಈ ಗೊಂಚಲಿನಲ್ಲಿ ಇದು ಮೂರನೆಯ ಮೊಗ್ಗು. ನನ್ನ ಮೊದಲಿನ ಕಿರಾತಾರ್ಜುನೀಯ ಮತ್ತು ಗಿರಿಜಾಕಲ್ಯಾಣಗಳು ಅದೇ ಇನ್ನೂ ಕೀರ್ತನಾ ಕ್ಷೇತ್ರದಲ್ಲಿ ಕಾಲಿಡಲು ಬಯಸುವ ಪ್ರಾಥಮಿಕ ಅಭ್ಯಾಸಿಗಳಿಗಾಗಿಯೇ ಬರೆಯಲ್ಪಟ್ಟುವಾದರೆ—ಇದು ಆ ರಂಗದಲ್ಲಿ ತಕ್ಕಮಟ್ಟಿಗೆ ಸಾಧನೆಮಾಡಿ ಪಳಗಿರುವ ಮಧ್ಯಮ ತರಗತಿಯ ಉತ್ಸಾಹೀ ಕಲಾವಿದರುಗಾಗಿಯೇ ನಿರ್ಮಿತವಾದ ಪ್ರಾಯೋಗಿಕ ಕೃತಿಯಾಗಿದೆ. ಇದನ್ನು ಕೂಡ ಆಶ್ರಮದ ಕೀರ್ತನ ಕಲಾವಿದೆ ಕುಮಾರಿ ವತ್ಸಲಾಳಿಂದ ಶ್ರೋತೃಗಳ ಮುಂದೆ ಪ್ರಯೋಗಿಸಿ ಅವರಿಂದ ತೃಪ್ತಿಕರವಾದ ಮೆಚ್ಚುಗೆಯನ್ನು ಪಡೆದ ಬಳಿಕವೇ ಈ ಪ್ರಕಟನೆಯ ಸಾಹಸಕ್ಕೆ ಕೈಹಾಕಿದ್ದೇನೆ. ಹಿಂದಿನೆಲ್ಲ ನನ್ನ ಕೃತಿಪುಷ್ಪಗಳನ್ನು ಆಘ್ರಾಣಿಸಿ ಈ ತಿರುಕನ ಬೆನ್ನು ಚಪ್ಪರಿಸಿ ಪ್ರೋತ್ಸಾಹಿಸಿದ ಅಭಿಮಾನಿಗಳು ಇದನ್ನೂ ಓದಿ, ನೋಡಿ, ಹರಸಿದರೆ ನಾನುಧನ್ಯ.

ಸಂತ ಗಿರಿಯಮ್ಮನವರ ವಿಚಾರವಾಗಿ ಒಂದೆರಡು ಮಾತು:—ಗಿರಿಯಮ್ಮನವರು ಆಗಿಹೋಗಿ ಈಗ ಸುಮಾರು ಎರಡು ಶತಮಾನಗಳು ಕಳೆದಿವೆ. ಇವರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರಾಗಿ ತಿಳಿಯುತ್ತದೆಯಲ್ಲದೆ ಈ ಎಲ್ಲವುಗಳಿಗೂ ತಮ್ಮ ಔಪಾಸನಾದೇವತೆಯಾದ "**ಹೆಳವನಕಟ್ಟೆ ರಂಗ**" ಎಂಬ ಅಂಕಿತವನ್ನು ಇತ್ತಿದ್ದಾರೆ. ಈ ಕಿರ್ತನೆಗಳನ್ನೆಲ್ಲ ಇವರು ಸನ್ನಿವೇಶದ ಹಿನ್ನಲೆಯ ಒತ್ತಡದಿಂದ ಸ್ಫುರ್ಯಸ್ಫೂರ್ತಿಗೊಂಡು ಹಾಡಿರುವರೇ ಹೊರತಾಗಿ ನಮ್ಮಂತಹ ಸಾಮಾನ್ಯ ನೊರಜು ಕವಿಗಳಂತೆ ಶಬ್ದಗಳನ್ನು

ಎಳೆದು, ತೀಡಿ, ತಿಕ್ಕಿ, ಉಜ್ಜಿ, ಒರೆಸಿ, ಬರೆದಂತವುಗಳಲ್ಲ........ಎಲ್ಲವೂ ಪ್ರಾಸಾದಿಕವಾಣಿಗಳು. ಗಿರಿಯಮ್ಮನವರು ಈ ಬಗೆಯ ಕೀರ್ತನೆಗಳನ್ನಲ್ಲದೇ ಭಾಗವತ, ಗಿಳೀಪಾರಿಜಾತ, ಶಂಕರ ಗಂಡನ ಕಥೆ, ಗಜೇಂದ್ರಮೋಕ್ಷ ಮೊದಲಾದ ಅನೇಕ ಗ್ರಂಥಗಳನ್ನೂ ಹಾಗೂ ಸೀತಾಸ್ವಯಂವರ, ಚಂದ್ರಹಾಸನ ಚರಿತ್ರೆ ಎಂಬೆರಡು ಕಾವ್ಯಗಳನ್ನು ಸಾಂಗತ್ಯ ರೂಪದಲ್ಲಿ ರಚಿಸಿರುವುದಾಗಿ ತಿಳಿಯುತ್ತದೆ. ಆದರೆ ಇವುಗಳ್ಯಾವುವೂ ಈಗ ನಮ್ಮ ಕೈಗೆ ಸಿಕ್ಕುವಂತಿಲ್ಲ. ಅಲ್ಲಲ್ಲಿ ಈ ಸಂಬಂಧಪಟ್ಟ ಕೆಲವು ಓಲೆಯ ಗರಿಗಳ ಪ್ರತಿಗಳು ಇರುವವಾಗಿ ಹೇಳುತ್ತಿದ್ದರೂ ಇವುಗಳನ್ನು ನೋಡಬೇಕೆಂದು ಮಾಡಿದ ನನ್ನ ಪ್ರಯತ್ನವೆಲ್ಲವೂ ನಿಷ್ಫಲವೇ ಆಯ್ತು. ಅವರ ಕೀರ್ತನೆಗಳನ್ನು ಸಂಗ್ರಹಿಸುವುದಕ್ಕಾಗಿಯೂ ಎಷ್ಟೋ ವರ್ಷಗಳಿಂದ ಸಾಹಸಪಟ್ಟೆ............ ಆದರೂ ದೊರೆತುದು ಬಹಳ ಅಲ್ಪವೇ? ಅವುಗಳಲ್ಲೂ ವಿಪರೀತ ಪಾಠಾಂತರ........ಎಲ್ಲವುಗಳಲ್ಲೂ ಸಾಕಷ್ಟು ಅಪದ್ಧ–ಆದರೂ ಅವುಗಳಲ್ಲೇ ಕೆಲವನ್ನು ಆರಿಸಿಕೊಂಡು ನನ್ನ ಅಲ್ಪಮತಿಗೆ ಹೊಳೆದಂತೆ ಸಂದರ್ಭೋಚಿತವಾಗಿ ಕಥೆಯಲ್ಲಿ ಅಳವಡಿಸಿಕೊಂಡಿರುತ್ತೇನೆ; ಇದರಲ್ಲಿ ನ್ಯೂನತೆಯಾಗಿದ್ದರೆ ಅದು ನನ್ನ ಪದರಿಗೆ...........ಸರಿಯಾಗಿದ್ದರೆ ಅದು ಆ ಮಹಾ ತಾಯಿಯ ಪ್ರೇರಣೆ.

ನಮ್ಮ ಕನ್ನಡನಾಡಿನಲ್ಲಿ ಸಂತ ಗಿರಿಯಮ್ಮನವರಂತಹ ಸಾಧ್ವೀಮಣಿಯರು, ಜ್ಞಾನಿಗಳು ತೀರ ವಿರಳ; ಇವರು ಕೇವಲ ಭಗವದ್ಭಕ್ತೆಯರೇ ಅಲ್ಲದೆ ಮಹಾ ಪವಾಡಗಾರ್ತಿಯರು, ಅಪರೋಕ್ಷಾನುಭವಿಗಳು; ಸಿದ್ಧಿಯನ್ನು ಹೊಂದಿದ ಮಹಾನುಭಾವೆಯರು. ಆದರೂ ಇಂತಹರ ಜೀವನ ಚರಿತ್ರೆಯು ಪ್ರಚಾರಕ್ಕೆ ಬಂದಿಲ್ಲ. ಆದುದರಿಂದ ನಮ್ಮ ಹಿರಿಯ ಸಾಹಿತಿಗಳು, ಸಂಶೋಧಕರು, ಈ ನಿಟ್ಟಿನಲ್ಲಿ ಪ್ರಯತ್ನಿಸಿ ಉಪಕರಿಸಬೇಕೆಂಬುದಾಗಿ ವಿನಂತಿಸುವೆ. ಅಲ್ಲದೆ ಅಡಗೂಲಜ್ಜಿಯ ಕಥೆ, ಭೂತಭೇತಾಳನ ಕಥೆ, ಕಾಗಕ್ಕ ಗುಬ್ಬಕ್ಕನ ಕಥೆಗಳನ್ನು ಚಿತ್ರೀಕರಿಸಲು ನಿಂತ ನಿರ್ಮಾತೃಗಳೂ, ದಿಗ್ದರ್ಶಕರೂ ಇಂತಹ ಮಹಾಸಾಧ್ವಿಯ ಜೀವನ ಚರಿತ್ರೆಗೆ ಸಂಬಂಧಪಟ್ಟ

ಇತಿಹಾಸವನ್ನು ತಾತ್ವಿಕದೃಷ್ಟಿಯಿಂದ ಹುಡುಕಿ ತೆಗೆದು ಚಿತ್ರೀಕರಿಸಿದಲ್ಲಿ ಅದೊಂದು ಮಹೋಪಕಾರವೇ ಆದೀತು....ಆದರೆ ಇಲ್ಲೊಂದು ಮಾತು–ಹಣ ಸಂಪಾದನೆಯು ಬಾಕ್ಸ್‌ಫುಲ್ ಆಗಬೇಕೆಂಬ ಗುರಿಯಿಂದ ಆ ಮಹಾ ಸಾಧ್ವಿಯ ಚರಿತ್ರೆಗೆ ಮಸಿ ಬಳಿದು ಎಂತೋ ಏನೋ ಮಾಡಿದ ಚಿತ್ರೀಕರಣಕ್ಕೆ ಮಾತ್ರ ಕೈಹಾಕದಿರೀ ಎಂಬುದಾಗಿ ವಿನಂತಿಸುವೆ.

ಈ ಕೀರ್ತನೆಯಲ್ಲಿಯ ಗೀತೆಗಳಿಗೆ ಸಂದರ್ಭೋಚಿತವಾದ ಧಾಟಿಗಳನ್ನು ಹಾಕಿಕೊಟ್ಟುದಲ್ಲದೆ ಅವುಗಳನ್ನು ಆ ಮಗುವಿಗೆ ಹೇಳಿಕೊಟ್ಟು, ಉಪಕರಿಸಿದ ಸಂಗೀತ ವಿದ್ವಾನ್ ಶ್ರೀ ವಿ. ಎಸ್. ಅಥಣೀಕರ್, "ಸಂಗೀತಾಭಿನಯ ಹಂಸ" ರವರಿಗೂ ಮತ್ತು ಇದರ ಪ್ರಯೋಗಾಭ್ಯಾಸದಲ್ಲಿ ಹಾರ್ಮೋನಿಯಂ ನುಡಿಸಿದ ಶ್ರೀ ಎ. ಎಂ. ರುದ್ರಾಚಾರ್ ಹಾಗೂ ತಬಲಾವಾದಕರಾದ ಶ್ರೀ ಹೆಚ್. ಎನ್. ರಾಮಣ್ಣ ಮಾಸ್ತರವರಿಗೂ ನಾನಿಲ್ಲಿ ಧನ್ಯವಾದಗಳನ್ನರ್ಪಿಸದಿದ್ದರೆ ಅದು ಮಹಾಪರಾಧವಾಗುತ್ತದೆ. ಎಂದಿನಂತೆಯೇ ಈ ಹೊತ್ತಿಗೆಯ ಮುದ್ರಣ ಮತ್ತು ಪ್ರಕಟಣೆಯಲ್ಲಿ ನೆರವಾದ ನನ್ನೆಲ್ಲ ಬಂಧುಗಳಿಗೆ ನೆನಕೆಗಳು.

ತಮ್ಮೆಲ್ಲರ ನಮ್ರ,

ತಿ ರು ಕ .



# ಸಮರ್ಪಣೆ

ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ
ಕಲಿಸಿ ಮೃದು ನುಡಿಗಳನು ಆಲಿಸಿ ಕೇಳ್ವ ಪರಿಣತರಂತೆ
ನೀನೆನಗೆ..................... ಕನಕದಾಸರು.

ಶಿಕವೂನಿ ಬೋಲ | ಕೇಲೆ ಕೌತುಕ ನವಲ |
ಆಪಣಿಯಾ ರಂಜವಿಲೆ | ಬಾಪೇಂ ಮಾಝಿಯಾ ವಿಠ್ಠಲೇ ||
ಸಂತ ತುಕಾರಾಮರು.

ಅಂತೆಯೇ ನನ್ನ ಒಳಗಿದ್ದು ಪ್ರೇರೇಪಿಸಿ–
ಕೈ ಹಿಡಿದು ಬರೆಯಿಸಿ ಓದಿ, ಕೇಳಿ,
ನೋಡಿ ಆನಂದಪಡುವ–

ಆ ಅವ್ಯಕ್ತ ಶಕ್ತಿಗೆ.



ಶ್ರೀ

# ಹೆಳವನಕಟ್ಟೆ ಸಂತ ಗಿರಿಯಮ್ಮ

( ಕೀರ್ತನ ಸಾಹಿತ್ಯ )



## ಪ್ರಾರ್ಥನೆ

ರಾಗ – ಹಮೀರ್ – ಧೀಮಾ (ತ್ರಿತಾಲ.)

ಹರಿಃ ಓಂ ಹರಿಃ ಓಂ ಹರಿಃ ಓಂ ಹರಿಃ ಓಂ
ಶಿವ ಓಂ ಶಿವ ಓಂ ಶಿವ ಓಂ ಶಿವ ಓಂ
ಗುರು ಓಂ ಗುರು ಓಂ ಗುರು ಓಂ ಗುರು ಓಂ....

## ಗಣಪತಿ ಸ್ತವನ

ರಾಗ – ಹಮೀರ್. ತ್ರಿತಾಲ.

ನಮಿಪೆನು ಗಣನಾಥಾ–ಸುಖದಾತಾ ॥ ಪ ॥
ಹಿಮಗಿರಿನಂದನೆ ಉಮೆ ತನುಜಾತಾ ॥
ಅಮಿತ ಬಲಾನ್ವಿತ ಮಂಗಲಚರಿತಾ ॥ ಪ ॥

ಮೊದಲ ಪೂಜೆಗೊಂಬುವ ನಿನ್ನಂಘ್ರಿಗೆ–
ಮುದದಲಿ ಬಾಗುತೆ ಬೇಡುವೆ ವರವಾ ॥ ೧ ॥

ನಂದಿ ವಾಹನನ ಮೋಹದ ಕಂದನೆ–
ವಂದಿಸುವೆನು ನಾ ಕರುಣೆಗಳರಸಾ ॥ ೨ ॥

ಶ್ರೀ ಪರಮೇಶಾದಾಸನ ಹೃದಯದಿ–
ನಿರುತ ನೆಲಸಿವರ ಮತಿ ನೀಡೆನುತಲಿ ॥ ೩ ॥

## ಶ್ರೀ ಶಾರದಾ ಸ್ತುತಿ

ರಾಗ – ರಾಗೇಶ್ರೀ. ತಾಲ – ಖವಾಲಿ

ಬಾರಮ್ಮ ಬಾ ಜನನೀ – ವಿಶ್ವ ಕುಟುಂಬಿನಿ ॥ ಪ ॥
ಬಿರಿದರಳಿದ ಮುಖ ಕಮಲದ ಕಾಂತಿಲಿ ।
ನಿರುತದಿ ಭಕುತರ ಹರಸುತೆ ಪ್ರೇಮದಿ ॥ ಅ. ಪ. ॥

ಬ್ರಹ್ಮ ಹರಿಹರರು ಅರ್ಚಿಪ ಚರಣವ ।
ಒಮ್ಮೆ ಎತ್ತಿ ನೀನಿತ್ತ ಬಾರಮ್ಮಾ........ ॥ ೧ ॥
ಕಂದನಳಲು ತಾಯ್ ಲಾಲಿಸುವಂದದಿ
ಇಂದೀ ಪರಮೇಶದಾಸರ ಪೊರೆಯಲು ॥ ೨ ॥

## ಶ್ರೀ ಗುರು ಸ್ತುತಿ

ರಾಗ – ಮಿಶ್ರಮಾಂಡ್. ತ್ರಿತಾಲ

ಸಾರಿದೆ ನಿನ್ನಯ ಚರಣಾ–ಭವ-
ಶರಧಿಯ ದಾಂಟಿಸೊ ಎನ್ನಾ........ ॥ ಪ ॥
ಗುರುವೇ ನಿನ್ನಯ ಧ್ಯಾನಾ–ಎನ್ನಯ-
ಹೃದಯಕೆ ಮಂಗಲ ಸ್ನಾನಾ ॥ ಪ ॥
ಜನನಿ ಜನಕರವು ನೀನೇ–ಎನ್ನಯ-
ಸನಿಯದ ಬಂಧುವು ನೀನೇ ॥
ಘನ ಸಂಪದವದು ನೀನೇ-ಗುರುವೇ–
ಮನದಾ ದೈವವು ನೀನೇ........ ॥ ೧ ॥
ವರದ ಹಸ್ತವನೆ ನೀಡೋ ಎನ್ನನೆ
ಚರಣ ಸೇವಕನ ಮಾಡೋ ॥
ದುರಿತಗಳನ ಈಡಾಡೋ ॥ ಎನ್ನನೆ
ಪರಮೇಶದಾಸನ ಮಾಡೋ ॥ ೨ ॥

– – x – –

ಜೈ ಜೈ ಶ್ರೀಮದ್ರಮಾರಮಣ ಗೋವಿಂದ ಗೋವಿಂದ ।
ಜೈ ಜೈ ನಮಃ ಪಾರ್ವತೀಪತೇ ಹರಹರ ಮಹಾದೇವ ।
ಶ್ರೀ ಸದ್ಗುರು ಮಹರಾಜಕೀ ಜೈ ।
ಸಬ್ ಸಾಧುಸಂತ ಮಹನೀಯೋಂಕೀ ಜೈ ।
ಜೈ । ಜೈ । ರಘುವೀರ ಸಮರ್ಥ ॥



# ಪೀಠಿಕೆ

ಕೀರ್ತನಾ ಪ್ರಾರಂಭದಲ್ಲಿ ಜ್ಞಾನಿಗಳಾದವರು "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶಾಸ್ತ್ರ ವಚನವನ್ನು ಮರೆತು-ಎಲ್ಲೆಲ್ಲಿಯೂ ಒಂದೇ ಆಗಿರುವ ಆ ಬ್ರಹ್ಮವಸ್ತುವಿಗೆ ಅರ್ಥಾತ್ ಪರಮಾತ್ಮನಿಗೆ ನಾಮರೂಪಗಳನ್ನು ಕೊಟ್ಟು ಕೇವಲ ನನ್ನ ರಾಮನೇ ಶ್ರೇಷ್ಠ, ಅಲ್ಲ ಶಿವನೇ ಶ್ರೇಷ್ಠ, ಅಲ್ಲ ಗಣಪತಿಯೇ ಹೆಚ್ಚು, ಅಲ್ಲ ಸರಸ್ವತಿಯೇ ಅಧಿಕ ಎಂಬ ಹುಚ್ಚು ಭ್ರಮೆಯಿಂದ ಬಡಿದಾಡುತ್ತಿರುವ ಮಾನವ ಕೋಟಿಯನ್ನು ಕಂಡು ಕನಿಕರದಿಂದ ಏನು ಹೇಳಿದ್ದಾರೇ ಅಂತಂದ್ರೆ—

ಶ್ಲೋಕ :—

ಯಂ ಶೈವಾಃ ಸಮುಪಾಸತೇ ಶಿವ ಇತಿ-ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಯಿತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ ।
ಸೋಽಯಂನೋ ವಿದದಾತು ವಾಂಛಿತ ಫಲಂ ತ್ರೈಲೋಕ್ಯನಾಥೋಹರಿಃ॥

ಅಂದರೆ—ಏ ಮಾನವಾ—ಯಾರು ಶೈವರಿಂದ ಶಿವನೆಂದೂ, ವೇದಾಂತಿಗಳಿಂದ ಬ್ರಹ್ಮನೆಂದೂ, ಬೌದ್ಧರಿಂದ ಬುದ್ಧನೆಂದೂ, ಪ್ರಮಾಣವಾದಿಗಳಾದ ನೈಯಾಯಿಕರಿಂದ ಕರ್ತನೆಂದೂ, ಜೈನರಿಂದ ಅರ್ಹತ್ ಎಂದೂ, ಮೀಮಾಂಸಕರಿಂದ ಕರ್ಮವೆಂದೂ ಪೂಜಿಸಿಕೊಳ್ಳಲ್ಪಡುವ ತ್ರೈಲೋಕ್ಯನಾಥನಾದ ಪರಮಾತ್ಮನಿದ್ದಾನೋ—ಆತನು ಮೂಲತಹಃ ಒಬ್ಬನೇ ಆದ ಆ ಪರಬ್ರಹ್ಮನಿದ್ದಾನಪ್ಪಾ—ಆತನು ನಿಮ್ಮೆಲ್ಲರ ಬಯಕೆಯನ್ನೂ ಈಡೇರಿಸಿಕೊಡಲಿ ಎಂಬುದಾಗಿ ಪ್ರಾರ್ಥಿಸಿದ್ದಾರಲ್ಲದೇ ಇನ್ನೂ ಸ್ವಲ್ಪ ಮುಂದಕ್ಕೆ ಹೋಗಿ—" ಏಕಂ ಸದ್ವಿಪ್ರಾಃ ಬಹುಧಾವದಂತಿ " ಎಂದೆನ್ನುವಂತೆ ಏ ಮಾನವಾ ಮೂಲತಹಃ ಒಂದೇ ಆಗಿರುವ ಆ ಬ್ರಹ್ಮವಸ್ತುವನ್ನು ಭಿನ್ನಭಿನ್ನವಾದ ಅನೇಕ ಹೆಸರುಗಳಿಂದ ಕರೆಯುವರಪ್ಪಾ ಎಂಬುದಾಗಿ ಕೂಡ ಅಪ್ಪಣೆ ಕೊಡಿಸಿದ್ದಾರೆ. ಹೇಗೆಂದರೆ ಮಣ್ಣಿನಿಂದಾದ ಪಾತ್ರೆಗಳನ್ನು ಮಡಕೆ, ಕುಡಿಕೆ, ಗಡಿಗೆ, ಶರಾವಗಳೆಂದು ಹೆಸರಿಸಿದರೂ ಅದರ ಮೂಲದಲ್ಲಿರುವ ಮಣ್ಣು ಮಾತ್ರ ಒಂದೇ ಆಗಿರುವಂತೆ ಅಥವಾ ಚಿನ್ನದಿಂದಾದ

ಒಡವೆಗಳನ್ನು ಕಂಕಣ, ಮೂಗುತಿ, ಓಲೆ, ಸರ, ಪಟ್ಟಿ, ಬಳೆ ಎಂದು ಕರೆದರೂ ಅವರ ಹೆಸರಿರುವುದೆಲ್ಲವೂ ಚಿನ್ನವೇ ಆಗಿರುವಂತೆ ವೈವಿಧ್ಯಪೂರ್ಣವಾದ ನಾಮರೂಪಗಳ ಹಿಂದಿರುವ ಆ ಚೈತನ್ಯ ವಸ್ತುವು ಒಂದೇ ಆಗಿರುತ್ತದೆ. ಮತ್ತು ಅದೇ ಬ್ರಹ್ಮವು; ಅದು ಅನಿರ್ವಚನೀಯವು; ಎಂಬುದಾಗಿ ಕೂಡ ಸಾರಿದ್ದಾರೆ. ಇದನ್ನೇ ಸಂತ ಕಬೀರರವರು ಒಂದು ಕಡೆಯಲ್ಲಿ—

ರಾಗ - ಸೂರಸಾರಂಗ. ತಾಲ - ಜಲದ್‌ಏಕ್ತಾ.

ತೇತಾ ಘಟ್-ತೇತಾ ಮತ್-ಬಹು ಭಾವನೇ ಬಹು ಬೇಕ್ |
ಸಬ್ ಘಟ್ ವ್ಯಾಪಕ ಹ್ವೈರಹಾ-ಸೋಯಿ ಆಪ್ ಅಲೇಖ್ ||

ಅಂದರೆ—ಈ ಪ್ರಪಂಚದಲ್ಲಿ ಎಷ್ಟೊಂದು ದೇಹಧಾರೀ ಜೀವಿಗಳಿವೆಯೋ ಅಷ್ಟು ಮತಗಳಿರುವುವು. ಆ ಎಲ್ಲ ಮತಗಳಲ್ಲೂ ಭಾಷೆ, ವೇಷ, ರೂಪಗಳಲ್ಲಿ ವಿವಿಧತೆಯು ಇದ್ದರೂ ಆ ಸಮಸ್ತ ಶರೀರಧಾರಿ ಜೀವಿಗಳಲ್ಲೂ ವ್ಯಾಪಿಸಿರುವವನು ಮಾತ್ರ ನಾಮರಹಿತನಾದ ಪರಮಾತ್ಮನೇ ಆಗಿರುವನು ಎಂದು ಉಪದೇಶಿಸಿದ್ದಾರೆ. ಅದೇ ಅಲ್ಲದೇ ಉಪನಿಷತ್ತುಗಳಲ್ಲಿ ಕೂಡ ಆ ಚೈತನ್ಯಸ್ವರೂಪವಾದ ಮೂಲವಸ್ತುವನ್ನೇ - ಬ್ರಹ್ಮ, ಆತ್ಮ, ಪರಮಾತ್ಮ ಎಂಬುದಾಗಿ ವರ್ಣಿಸಿದ್ದಾರೆ. ಆತನೇ ಎಲ್ಲಾ ಶಾಸ್ತ್ರಗಳ ಮತ್ತು ವಸ್ತುಗಳ ಉಗಮಸ್ಥಾನ. ಆತನು ಸ್ವಸಂಪೂರ್ಣನು, ಅಮರನು, ನಿತ್ಯನು, ಸರ್ವವ್ಯಾಪಕನು; ಅಷ್ಟೇ ಅಲ್ಲ—ಅನಾದಿ ಅನಂತನು ಕೂಡ. ಆತನು ಎಲ್ಲ ದೇಹಧಾರೀ ಜೀವಿಗಳ ಅಂತರ್ಯದಲ್ಲಿ ನೆಲಸಿದ್ದು ಎಲ್ಲ ಮನಸ್ಸುಗಳ ಕಾರ್ಯಕಲಾಪಗಳ ಸಾಕ್ಷೀಭೂತನಾಗಿರುವನು........ಆತನು ಸತ್ ಚಿತ್ ಆನಂದಸ್ವರೂಪನು. ಇಂತಿರುವ ಆ ಪರವಸ್ತುವಿನೊಡನೆ ತನ್ನ ಅನನ್ಯತೆಯನ್ನು ಸಾಧಿಸಿಕೊಳ್ಳುವುದೇ ಜೀವಿಯ ಜೀವಿತದ ಮೂಲಉದ್ದೇಶ; ಎಲ್ಲದರಲ್ಲೂ ಆ ಏಕವಸ್ತುವನ್ನೂ, ಆ ಒಂದರಲ್ಲಿ ಎಲ್ಲವನ್ನೂ ಕಾಣುವ ಚೇತನವೇ ಮಹಾ ಚೇತನವು; ಪುಣ್ಯಚೇತನವು; ಆದರೆ ಇದಕ್ಕೆ ದೀರ್ಘವಾದ ಪ್ರಯತ್ನಬೇಕು; ಸಾಧನೆ ಬೇಕು. ಪ್ರಾಪಂಚಿಕವಾದ

ವಿಷಯದಲ್ಲಿ ಬೆರೆತಿರುವ ಮನಸ್ಸನ್ನು ವಿಮುಖಗೊಳಿಸಿ ಆ ಬ್ರಹ್ಮ ವಸ್ತುವಿನಲ್ಲಿ ಸಮರಸಗೊಳ್ಳುವಂತೆ ಮಾಡಿದ ಬಳಿಕ ಅರ್ಥಾತ್ ಮನಸ್ಸು ಬ್ರಹ್ಮದಲ್ಲಿ ಲೀನವಾದ ಮೇಲೆ ಆತನು ನಭೋಮಂಡಲವನ್ನು ಭೇದಿಸಿ ಮುಕ್ತಿಯನ್ನು ಹೊಂದಬಲ್ಲನೆಂಬುದಾಗಿ ಜ್ಞಾನಿಗಳು ಅಪ್ಪಣೆ ಕೊಡಿಸಿದ್ದಾರೆ. ಆದರೆ ಅಜ್ಞಾನಿಯಾದವನು – ಆ ಪರಮಾತ್ಮನನ್ನು ನೋಡುವ ತನ್ನ ಜ್ಞಾನಚಕ್ಷುವಿನ ಮೇಲೆ ಭ್ರಮೆಯ ತೆರೆಯನ್ನು ಹಾಕಿ ಆತನಿಗೆ ವಿವಿಧವಾದ ನಾಮ ರೂಪಗಳನ್ನಿತ್ತು ಆತನಿಗಾಗಿ ಎಲ್ಲೆಲ್ಲಿಯೋ ಅಲೆಯುತ್ತಿದ್ದಾನೆ. ಇದನ್ನೇ ಸಂತ ಕಬೀರರು ಹೀಗೆ ಹೇಳಿದ್ದಾರೆ—

ದೋಹಾವಲಿ—

ರಾಗ–ಪೀಲು. ಖವಾಲಿ

ಜಾಕಾರನ ಜಗಮೂಂಡಯಾ - ಸೋತೋ ಹೃದಯ - ಮಾಹಿ।
ಘುದಾ ದೀಯಾ - ಭರಮಕಾ–ತೋಹೇ ಸೂಸೆನಾಹಿ ॥

ಅಂದರೆ—ಅಪ್ಪಾ–ನೀನು ಯಾರಿಗಾಗಿ ಲೋಕವನ್ನೆಲ್ಲ ಅರಸುತ್ತಿರುವೆಯೋ ಆತನು ನಿನ್ನಲ್ಲೇ ಇರುವನಪ್ಪಾ–ನಿನ್ನ ಮನಸ್ಸಿನ ಮೇಲಿರುವ ಅಜ್ಞಾನದ ತೆರೆಯನ್ನು ಸರಿಸಿ ನೋಡಿದಲ್ಲಿ ಆತನು ಕಾಣಿಸುವನಪ್ಪಾ ಎಂಬುದಾಗಿ ಉಪದೇಶಿಸಿದ್ದಾರೆ. ಇದನ್ನೇ ಇನ್ನೊಬ್ಬ ನಮ್ಮ ಕನ್ನಡನಾಡಿನ ತತ್ತ್ವೋಪದೇಶಕರು—

ಲಾವಣಿ

ಅಲ್ಲಿಹನೀಶ್ವರ ಇಲ್ಲಿಲ್ಲೆಂಬುದ ಸೊಲ್ಲು ಸಲ್ಲದಿರು ಕೇಳಣ್ಣಾ।
ಎಲ್ಲೆಲ್ಲರಸಿವರಲ್ಲಲ್ಲಿರುತಿಹ।
ಎಲ್ಲವು ತಾನಾಗಿರುತಿಹ ದೇವನ ॥ ಪ ॥
ಕಾಶಿಯೊಳಗೆ ಕಾಂಚಿಯೊಳಿಹನೆನುತಲಿ।
ದೇಶದೇಶಗಳೆಲ್ಲವನಣ್ಣಾ–॥
ಘಾಸಿಯಾಗಿ ತಿರುಗುತಲಿಹೆಯಲ್ಲದೆ।
ವಾಸುದೇವ ನಿನ್ನೊಳಗಿಹನರಿಯದೆ ॥

ದೇಹವೆಂಬ ದೇವಾಲಯದೊಳಗೇ |
ಜೀವನೆಂಬ ಈಶ್ವರನಣ್ಣಾ ||
ಮೋಹವೆಂಬ ನಿರ್ಮಾಲ್ಯವು ಕಳೆಯಲು |
ಸೋಹಂಭಾವದಿ ಪೂಜೆಗೊಂಬವನ || ೨ ||
ಮರುಳು ಹಿಡಿದು ಮಾತಾಡುವ ದೈವ |
ಕ್ಕೈರಗಿದರೇನಹುದೇನಣ್ಣಾ ||
ಭರಿತನಾಗಿ ಸಚರಾಚರ ಜೀವದೋ |
ಳಿರುತಿಹ ಚೈತನ್ಯಾತ್ಮಾರಾಮನ || ೩ ||

ಎಂಬಂತೆ—ಆ ಚೈತನ್ಯ ಸ್ವರೂಪಿಯಾದ ಪರಮಾತ್ಮನು ಎಲ್ಲೆಲ್ಲೋ ಇರದೆ ನಿನ್ನಲ್ಲೇ ಇರುವನೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ: ತಿಲದಲ್ಲಿರುವ ತೈಲದಂತೆ–ಶಿಲೆಯಲ್ಲಡಗಿರುವ ಬೆಂಕಿಯಂತೆ ಕ್ಷೀರದಲ್ಲಿರುವ ಘೃತದಂತೆ, ಪರಮಾತ್ಮನು ನಮ್ಮಲ್ಲೇ ಅಡಗಿರುವನು; ಆದರೆ ಅವನನ್ನು ಕಾಣಲು ಪ್ರಯತ್ನ, ಸಾಧನೆ, ತಪಸ್ಸು ಬೇಕು. ಸಾಧನಾಬಲದಿಂದ ಒಮ್ಮೆ ಆ ಸದ್ವಸ್ತುವಿನ ಅರಿವಾಯಿತೆಂದರೆ ಮತ್ತೆ ಆತನಿಗೆ ದುಃಖದ ಕೋಟಲೆ ಇಲ್ಲ; ಸಾವಿನ ಅಂಜಿಕೆಯಿಲ್ಲ ಮತ್ತು ಲೋಕದ ಭಯವಿಲ್ಲ. ಲೋಕದಲ್ಲಿಯ ಎಲ್ಲಾ ಮತಧರ್ಮಗಳೂ ಮಾನವನ ಈ ದುಃಖ ನಿವೃತ್ತಿಗಾಗಿಯೇ ಇವೆ. ಪ್ರಪಂಚದಲ್ಲಿಯ ಅನಾದಿ ನಿತ್ಯವಾದ ಮೂರು ವಸ್ತುಗಳೆಂದರೆ – ಅದು ಜೀವ, ಪ್ರಕೃತಿ ಮತ್ತು ಪರಬ್ರಹ್ಮ. ಇವುಗಳಲ್ಲಿ ಪ್ರಕೃತಿಯು ಜಡವಾಗಿದ್ದು ಅದಕ್ಕೆ ಸುಖ ದುಃಖಗಳ ಸೋಂಕಿಲ್ಲ; ಇನ್ನು ಪರಬ್ರಹ್ಮವು ಆನಂದಸ್ವರೂಪಿಯಾಗಿರುವುದರಿಂದ ಅದಕ್ಕೂ ದುಃಖ ಕ್ಲೇಶಗಳ ಸಂಬಂಧವಿಲ್ಲ–ಆದರೆ ದುಃಖದ ಅನುಭವವು ಏನಿದ್ದರೂ ಅದು ಜೀವಿಗೆ ಮಾತ್ರ. ಆದುದರಿಂದ ಲೋಕದಲ್ಲಿಯ ಎಲ್ಲಾ ಶಾಸ್ತ್ರಗಳೂ ತತ್ವಗಳೂ ಈ ಜೀವಿಯ ದುಃಖ ನಿವೃತ್ತಿಗಾಗಿ ಮಾತ್ರ. ಆದುದರಿಂದ ಮಾನವನಾದವನು ಲೋಕದಲ್ಲಿಯ ವಿವಿಧತೆಯಲ್ಲಿಯೇ ಏಕತ್ವವನ್ನು ಕಂಡು, ಆ ಏಕತ್ವದಲ್ಲಿಯೇ ಸರ್ವವನ್ನೂ ಕಾಣಲು ಪ್ರಯತ್ನಿಸಬೇಕು. ಆದುದರಿಂದಲೇ ಸಂತ ಕಬೀರರು ಒಂದು ಕಡೆಯಲ್ಲಿ—

**ದೋಹಾವಲಿ—**

ರಾಗ ಬಸಂತ-ತ್ರಿತಾಲ

ಆದಿನಾಮ ನಿಜಮೂಲಹೈ-ಔರಮಂತ್ರ ಸಬಡಾರ |
ಕಹತಕಬೀರ ನಿಜನಾಮಬಿನೋ ಬೂಡಿಮೂಲ ಸಂಸಾರ ||

ಎಂದರೆ ಅನಾದಿಯಾದ ಬ್ರಹ್ಮಪದವು ಸಮಸ್ತ ಜಗತ್ತಿಗೇ ಮೂಲವು; ಆಧಾರವು. ಅದಲ್ಲದೇ ಯಾವ ಮಂತ್ರರೂಪವಾದ ಉಪದೇಶ, ನಿರ್ದೇಶನಗಳಿವೆಯೋ ಅವೆಲ್ಲವೂ ಆ ಬ್ರಹ್ಮರೂಪೀ ವೃಕ್ಷದ ಶಾಖೆಗಳಾಗಿರುವುವು. ಆ ಬ್ರಹ್ಮವಸ್ತುವಿನ ನಾಮವಿಲ್ಲದೇ ಈ ಸಮಸ್ತ ಜಗತ್ತೂ ಅವಿದ್ಯಾ ಸಮುದ್ರದಲ್ಲಿ ಮುಳುಗಿ ಸಾಯುವುದು ಎಂಬುದಾಗಿ ಕೂಡ ಅಪ್ಪಣೆ ಕೊಡಿಸಿದ್ದಾರೆ. ಇದನ್ನೇ ಸಂತ ತುಕಾರಾಮರವರು ಹೇಗೆ ಹೇಳಿದ್ದಾರೆಂದರೆ-

**ಅಭಂಗ—**

ರಾಗ-ಮಿಶ್ರಪಹಾಡಿ ತಾಲ-ಖವಾಲಿ

ಆದಿಬೀಜ ಏಕಲೇ-ಬೀಜ ಅಂಕುರಲೆ ರೂಪವಾಡಲೇ ||ಧೃ||
ಏಕಾಬೀಜಾ ಪೋಟೀ ಪೋಟೀ | ತರುಕೋಟೀ |
ಕೋಟೀ | ಜನ್ಮ ಘೇತಿ ಸುಮನೇ ಫಳೇ ||
ಕೋಟೀ ಜನ್ಮ ಘೇತಿ ಸುಮನೇ ಫಳೇ || ೧ ||
ವ್ಯಾಪ್ತನಿಜಗತಾ | ತೂಹಿ ಅನಂತಾ | ಬಹು ವಿಧರೂಪೆ ಘೇಸಿ |
ಘೇಸಿ | ಪರಿಅಂತಿ | ಬ್ರಹ್ಮಏಕಲೇ || ೨ ||

ಎಂದರೆ ಒಂದು ಬೀಜದಿಂದ ಅಂಕುರಿಸಿದ ಮೊಳಕೆಯು ಮಹಾವೃಕ್ಷವಾಗಿ ಬೆಳೆದಂತೆ ನಮ್ಮ ಕಣ್ಣಿಗೆ ಕಾಣುವ ಸಕಲ ಚರಾಚರ ವಸ್ತುಗಳೂ ಆ ಅನಾದಿಯಾದ ಪರಬ್ರಹ್ಮದ ಅಂಶವೇ ಆಗಿರುತ್ತವೆ; ಹೀಗೆ ಈ ಜೀವಿಗೆ ಅನಾದಿಯಿಂದಲೂ ಪರಮಾತ್ಮನ ಅರ್ಥಾತ್ ಈಶ್ವರನ ಅಖಂಡ ಸಂಬಂಧವಿದ್ದು ಇದು ಆ ಪರಬ್ರಹ್ಮನಿಂದ ಜೊತೆಯಾಗಿಗವೇ ಅವನ ಒಂದು ಅಂಶವೇ ಆಗಿರುತ್ತದೆ. ಆದುದರಿಂದ ಜ್ಞಾನಿಗಳಾದವರು " ಏಕೋ ದೇವಸ್ಸರ್ವ

ಭೂತೇಷು ಗೂಢಃ" ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆಯಲ್ಲದೇ-ಮಾನವನಾದವನು ಪರಮಾತ್ಮನು ಎಲ್ಲದರಲ್ಲಿಯೂ ಇರುವನು : ಎಲ್ಲೆಲ್ಲಿಯೂ ಇರುವನು ಹಾಗೂ ತನ್ನಲ್ಲಿಯೂ ಇರುವನು ಎಂದು ಮನನ ಮಾಡಿಕೊಂಡಾಗಲೇ ಪ್ರಪಂಚದ ಮಾಯೆಯನ್ನು ದಾಟಲು ಶಕ್ತನಾಗುತ್ತಾನೆ ಎಂಬುದಾಗಿ ಕೂಡ ಸಾರಿದ್ದಾರೆ. ಆದರೆ ಜಾತ್ರೆಗೆ ಬಂದ ಹೆಣ್ಣು-ತನ್ನ ಪತಿಯ ಮನೆಯನ್ನು ಮರೆತು ಸಾತೇರು ಸಂಗಾತಿಗಳೊಡನೆಯೇ ವಿಹರಿಸಲು ನಿಂತಂತೆ ಈ ಜೀವವೆಂಬ ಹೆಣ್ಣು ಕೂಡ ಆ ಜಗತ್ಪುರುಷನಾದ ನಲ್ಲನನ್ನು ಮರೆತು ದುಃಖಕ್ಕೀಡಾಗಿ ಅಲೆಯುತ್ತಿದ್ದಾಳೆ. ಆದರೆ ಶಾಸ್ತ್ರಕಾರರು ಹೇಳುವಂತೆ—

ಶ್ಲೋಕ—

ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ||

ಎಂದೆನ್ನುವಂತೆ ಮನುಷ್ಯನ ಬಂಧನ ಮತ್ತು ಮುಕ್ತಿಗೆ ಆತನ ಮನಸ್ಸೇ ಕಾರಣವು. ಈ ಸಂಸಾರ ಹಾಗೂ ಈ ಪ್ರಪಂಚವೆಂಬುದೊಂದು ಮುಳ್ಳಿನ ಮರ ; ಇದರಲ್ಲಿ ತುಂಬಿರುವುದೆಲ್ಲ ದುಃಖ, ಕ್ಲೇಶ, ವ್ಯಥೆಗಳೆಂಬ ಮುಳ್ಳುಗಳೇ. ಆದರೆ ಇದನ್ನೇ ಸುಖವೆಂದು ಅಜ್ಞಾನಿಯಾದವನು ಬಿಗಿದಪ್ಪಿ ದುಃಖವನ್ನನುಭವಿಸುತ್ತಿದ್ದಾನೆ. ಇಂತಲ್ಲ ತನ್ನ ಬಂಧನಕ್ಕೂ ತನ್ನ ಮುಕ್ತಿಗೂ ತಾನೇ ಕಾರಣನೆಂದು ಅರಿತು ಅದರ ಬಿಡುಗಡೆಗೆ ಪ್ರಯತ್ನಿಸಿದಾಗಲೇ ಮಾನವನ ನಿಜವಾದ ಕಲ್ಯಾಣ ಉಂಟಾಗುತ್ತದೆ. ಪರಮಾತ್ಮನು ಜೀವರುಗಳನ್ನು ಲೋಕಕ್ಕೆ ಭಕ್ತಿ ಜಲವನ್ನು ತುಂಬಿ ತರುವಂತೆ ಆಜ್ಞಾಪಿಸಿ ಕಳುಹಿಸಿರುತ್ತಾನೆ. ಆದರೆ ಅವರು ಜಗತ್ತಿನಲ್ಲಿಯ ಮಾಯಾಜಾಲದಲ್ಲಿ ಸಿಲುಕಿ ಒದ್ದಾಡುತ್ತಿರುತ್ತಾರೆ. ಇವರ ಬದಲು ಮುಮುಕ್ಷುವಾದವನು ತನು-ಮನವನ್ನು ದಂಡಿಸಿ ಸತ್ಕರ್ಮವನ್ನು ಮಾಡಿ ಪರಮಾತ್ಮನಲ್ಲಿ ಶರಣಾಗತನಾದಲ್ಲಿ ನಿಶ್ಚಯವಾಗಿಯೂ ಆತನು ದೈವಕೃಪೆಗೆ ಪಾತ್ರನಾಗುತ್ತಾನೆ....ಅರ್ಥಾತ್ ಮುಕ್ತಿಯನ್ನು ಪಡೆಯುತ್ತಾನೆ. ಇದಕ್ಕೆ ದೃಷ್ಟಾಂತವಾಗಿ ಜ್ಞಾನಿಗಳಾದವರು ಒಂದು ಕಥೆಯನ್ನು ಹೇಳಿದ್ದಾರೆ....ಕೇಳಿ—

ಒಮ್ಮೆ ಎರಡು ಕಪ್ಪೆಗಳು ಒಂದು ದೊಡ್ಡ ಮೊಸರಿನ ಮಡಕೆಯಲ್ಲಿ ಹಾರಿಕೊಂಡವಂತೆ ; ಆಗ ಅವುಗಳಲ್ಲಿ ಒಂದು ಭಯದಿಂದ ನಡುಗುತ್ತ— ಅಯ್ಯೋ ನಾನು ಕೆಟ್ಟೆ–ಈಗ ಈ ಮಡಕೆಯಿಂದ ಪಾರಾಗಲು ನನಗೆ ದಾರಿ ಇಲ್ಲ ಎಂದು ಭಯಭೀತವಾಗಿ ಚೀರಿಡುತ್ತ ಮೇಲಕ್ಕೆ ಬರಲು ಪ್ರಯತ್ನಿಸದೇ ಅಲ್ಲಿಯೇ ಮುಳುಗಿ ಸತ್ತಿತಂತೆ. ಆದರೆ ಇನ್ನೊಂದು ಹೇಗಾದರೂ ಇಲ್ಲಿಂದ ಪಾರಾಗಲೇಬೇಕೆಂದು ಯೋಚಿಸಿ ಧೈರ್ಯದಿಂದ ಅಲ್ಲೇ ಈಜುತ್ತ ತಿರುಗಾಡುತ್ತಿರಲಿಕ್ಕಾಗಿ ಸತತ ಅದರ ಈ ಕೈಕಾಲಿನ ಚಲನೆಯ ಕ್ರಿಯೆಯಿಂದಾಗಿ ಮೊಸರು ಮಥಿಸಿದಂತಾಗಿ ಅದರಲ್ಲಿಯ ಬೆಣ್ಣೆಯು ಮುದ್ದೆಯಾಗಿ ಮೇಲೆ ತೇಲುತ್ತ ನಿಂತಿರಲು ಆ ಕಪ್ಪೆಯು ಆ ಬೆಣ್ಣೆಯ ಮುದ್ದೆಯನ್ನೇರಿ ನಿಂತು ಅಲ್ಲಿಂದ ಮಡಕೆಯ ಮೇಲಕ್ಕೆ ನೆಗೆದು ಅದರಿಂದ ಪಾರಾಯಿತಂತೆ. ಅದರಂತೆಯೇ ದೇಹಧಾರಿಯಾದ ಜೀವನು ಜಗತ್ತಿನ ಬಂಧನಕ್ಕೆ ಒಳಗಾದಾಗಲೂ ಕಂಗೆಡದೆ ಪ್ರಯತ್ನಪೂರ್ವಕವಾಗಿ ಸಾಧನೆಮಾಡಿ ಪರಮಾತ್ಮನಲ್ಲಿ ಶರಣು ಹೋದನೆಂದರೆ ಆತನು ಮುಕ್ತಿಯನ್ನು ಪಡೆದೇ ಪಡೆಯುತ್ತಾನೆ. ಎಂಬುದರಲ್ಲಿ ಸಂದೇಹವಿಲ್ಲ. ಆದುದರಿಂದಲೇ ಜ್ಞಾನಿಗಳಾದವರು ಏ ಮಾನವಾ—ನೀನು ಶಿವನು ಬೇರೆ ; ವಿಷ್ಣುವು ಬೇರೆ ; ಜಗನ್ಮಾತೆಯಾದ ಶಕ್ತಿಯು ಬೇರೆ, ಗಣಪತಿಯು ಬೇರೆ ಎಂಬ ಭ್ರಮೆಗೆ ಒಳಗಾಗದೇ ಅನನ್ಯ ಭಕ್ತಿಯಿಂದ ಯಾತೇ ದೇವರನ್ನಾದರೂ ಯಾವ ಹೆಸರಿನಿಂದಲೇ ಆದರೂ ಆರಾಧಿಸಪ್ಪಾ—ನಿನ್ನ ಕಲ್ಯಾಣವಾಗುತ್ತದೆ ಹೇಗೆಂದರೆ—

ಶ್ಲೋಕ—

ಯಥಾ ತರೋರ್ಮೂಲ ನಿಷೇಚನೇನ-
ತೃಪ್ಯಂತಿ ತತ್ಸ್ಕಂಧ ಭುಜೋಪಶಾಖಾಃ ।
ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ ।
ತಥೈವ ಸರ್ವಾರ್ಪಣ ಮಚ್ಯುತೇಜ್ಯಾ ॥

ಎಂದರೆ—ಅಪ್ಪಾ ಗಿಡದ ಬುಡಕ್ಕೆ ನೀರನ್ನು ಹಾಯಿಸಿದರೂ ಅದು ಹೇಗೆ ಆ ಮರದ ಕೊಂಬೆರೆಂಬೆಗಳಿಗೆಲ್ಲ ವ್ಯಾಪಿಸುವುದೋ ; ಅಥವಾ ಪ್ರಾಣಕ್ಕೆ

ಮಾಡಿದ ಉಪಚಾರಾತಿಥ್ಯಗಳು ಯಾವ ರೀತಿಯಲ್ಲಿ ಆತನೆಲ್ಲ ಇಂದ್ರಿಯ ಗಳಿಗೂ ಸೇರುವುದೋ ಅದೇ ರೀತಿಯಲ್ಲಿ ಸರ್ವದೇವತೆಗಳಿಗೂ ಮಾಡಿದ ಆರಾಧನೆಯು ಆ ಪರಬ್ರಹ್ಮ ಸ್ವರೂಪನಾದ ಅಚ್ಯುತನಿಗೇ ಅರ್ಥಾತ್ ಪರಮಾತ್ಮನಿಗೇ ಸಲ್ಲುವುದಪ್ಪಾ ಎಂಬುದಾಗಿ ಉಪದೇಶಿಸಿದ್ದಾರೆ. ಆದುದ ರಿಂದಲೇ ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು—

ಶ್ಲೋಕ—

> ಯೋ ಯೋ ಯಾಂ ಯಾಂ-ತನೂಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ ।
> ತಸ್ಯ ತಸ್ಯಾಚಲಾಂ ಶ್ರದ್ಧಾಂ-ತಾಮೇವ ವಿದಧಾಮ್ಯಹಂ ॥

ಎಂದರೆ ಯಾರು ಯಾರು ಯಾವ ಯಾವ ನಾಮರೂಪದಿಂದ ನನ್ನನ್ನು ಆರಾಧಿಸುತ್ತಾರೋ ಅವರವರಿಗೆ ಅಲ್ಲಲ್ಲಿಯೇ ಶ್ರದ್ಧೆಯನ್ನು ಕೊಡುವೆನಪ್ಪಾ ಎಂಬುದಾಗಿ ತಿಳಿಯ ಹೇಳಿದ್ದಾನೆ. ಆದುದರಿಂದಲೇ ಶಾಸ್ತ್ರಕಾರರು "ಸರ್ವಂ ಖಲ್ವಿದಂ ಬ್ರಹ್ಮ"; ಏಕಂ ಸದ್ವಿಪ್ರಾಃ ಬಹುಧಾವದಂತಿ; ಏಕೋ ದೇವಸ್ಸರ್ವ ಭೂತೇಷುಗೂಢಃ— ಅರ್ಥಾತ್-ಆ ಬ್ರಹ್ಮವಸ್ತುವೇ ಎಲ್ಲೆಲ್ಲಿಯೂ ತುಂಬಿರುವುದಪ್ಪಾ; ದೇಹಧಾರಿಗಳಾದ ಎಲ್ಲ ಜೀವಿಗಳಲ್ಲೂ ಆ ಒಬ್ಬನೇ ಪರಮಾತ್ಮನು ಇರುವನಪ್ಪಾ ಎಂದು ಸ್ಪಷ್ಟವಾಗಿ ಭ್ರಾಂತ ಜೀವಿಗ ಳಿಗೆ ಎಚ್ಚರಿಕೆಯನ್ನು ನೀಡಿ ಉಪದೇಶಿಸಿದ್ದಾರೆ. ಆದ್ದರಿಂದ ಎಲ್ಲರೂ ಒಮ್ಮೆ ಈ ಸಂತೋಷದ ಸಮಯದಲ್ಲಿ ಆ ಪರಮಾತ್ಮನನ್ನು ಪ್ರಾರ್ಥಿಸೋಣ.

ಭಜನೆ—

ರಾಗ - ಸಾರಂಗ. ತಾಳ - ಖವಾಲಿ.

> ಜೈ ಜೈ ನಾರಾಯಣಹರಿ । ಜೈ ಜೈ ವಾಸುದೇವಹರಿ ॥
> ಜೈ ಜೈ ಶಂಕರ ತ್ರಿಪುರಾರೀ । ಜೈ ಜೈ ಅಂಗಜಮದಹಾರಿ ॥೧॥
>
> ಜೈ ಜೈ ಶ್ರೀಮದ್ರಮಾರಮಣ ಗೋವಿಂದ ಗೋವಿಂದ ।
> ಜೈ ಜೈ ನಮಃ ಪಾರ್ವತೀಪತೇ ಹರಹರ ಮಹಾದೇವ ।

ಅಂ ! ಆಶ್ಚರ್ಯ ! ಪರಮಾಶ್ಚರ್ಯ !! ಹೀಗೇಕೇ ಅಂತ ನನ್ನ ಪ್ರಶ್ನೆ. ದುಷ್ಟದಾನವರನ್ನು ಕುಟ್ಟಿ ಧ್ವಂಸಮಾಡಿದ ಶ್ರೀರಾಮನ ಉಪಾಸಕರು ನಾವು; ಮಹಾ ಮಹಾ ರಾಕ್ಷಸರನ್ನು ನಿರ್ನಾಮ ಮಾಡಿದ ಶ್ರೀ ಸದಾಶಿವನ ಆರಾಧಕರು ನಾವು ; ವೀರ ಶಿರೋಮಣಿಗಳಾದ ಹನುಮ, ಭೀಮ, ಭೀಷ್ಮರಂತಹ ಪ್ರತಾಪಶಾಲಿಗಳ ವಂಶಜರು ನಾವು ; ದ್ವಾರಕೆಯಲ್ಲಿ ಪಟ್ಟದರಸಿಯರೊಡನೆ ಕ್ರೀಡಾಮಗ್ನನಾಗಿದ್ದ ಶ್ರೀಕೃಷ್ಣ ಪರಮಾತ್ಮನನ್ನು ಒಂದೇ ಕೂಗಿಗೆ ಬಡಿದೆಬ್ಬಿಸಿ ಕರೆದ ಪಾಂಚಾಲೆಯ ಕುಲಜರು ನಾವು ; ಕ್ಷೀರಸಾಗರದ ಮಧ್ಯೆ ವೈಕುಂಠದಲ್ಲಿ ಓಲೈಸಿಕೊಳ್ಳುತ್ತಿದ್ದ ಶ್ರೀಮನ್ನಾರಾಯಣನನ್ನು ಒಂದೇ ಒಂದು ಕರೆಗೆ ಬರಮಾಡಿಕೊಂಡ ಕರಿರಾಜನ ನಾಡವರು ನಾವು ; ಅಷ್ಟೆ ಅಲ್ಲ–ಕೈಲಾಸಾಧಿಪತಿಯಾದ ಶಂಕರನನ್ನು ಒಂದೇ ಒಂದು ಮೊರೆಯಿಂದ ಎಳೆತಂದ ಬಾಲ ಮಾರ್ಕಾಂಡೇಯನ ವಂಶಿಕರು ನಾವು. ಹೀಗಿದ್ದರೂ ಇದ್ಯಾಕೆ ಈ ಹೇಡಿತನ ಎಂದು ನನ್ನ ಪ್ರಶ್ನೆ. ಹಿಂದಿನ ಆ ಮಹಾ ಮಹಿಮರ ಕ್ಷಾತ್ರ ತೇಜ, ಬಾಹುಬಲ ಇಂದು ನಮ್ಮಲ್ಲಿ ಇಲ್ಲದೇ ಇರಬಹುದು; ರಟ್ಟೆಯ ಶಕ್ತಿಯನ್ನು ನಾವು ಕಳೆದುಕೊಂಡಿರಬಹುದು....ಆದರೆ ಬಾಯಿಯ ಸಾಮರ್ಥ್ಯ, ನಾಲಿಗೆಯ ಶಕ್ತಿಯೂ ಇಂದು ನಮಗಿಲ್ಲವೇ ? ಅಂತಹ ಹೇಡಿಗಳೇ ನಾವು ? ಅಂತಹ ದಿಕ್ಕೆಟ್ಟ, ಅಂಜುಬುರುಕರೇ ನಾವು ? ಎಂದು ನನ್ನ ಪ್ರಶ್ನೆ. ಛೇ ! ಛೇ ! ಹಾಗೆಂದಿಗೂ ಇರಲಾರದು. ನಾವು ನೀವು ಎಲ್ಲರೂ ರಟ್ಟೆಯ ಮುಟ್ಟಗಲ್ಲದಿದ್ದರೂ ಬಾಯಿಬಿಟ್ಟು ಗಟ್ಟಿಯಾಗಿ ಕೂಗುವುದರಲ್ಲಾದರೂ ಗಟ್ಟಿಗರೆಂದು ಒಮ್ಮೆ ತೋರಿಸಿಕೊಡುವ. ಆದುದರಿಂದ ಎಲ್ಲರೂ ನಾಚಿಕೆ, ಸಲ್ಲದ ಗಂಭೀರತೆ, ಭಯ, ಭೀತಿಯನ್ನು ಬಿಟ್ಟು ಗಟ್ಟಿಯಾಗಿ ಇನ್ನೊಮ್ಮೆ ಪರಮಾತ್ಮನನ್ನು ಪ್ರಾರ್ಥಿಸೋಣವೆಂಬುದಾಗಿ ವಿನಂತಿಸುತ್ತೇನೆ.

ಜೈ ಜೈ - ನಾರಾಯಣ ಹರಿ । ಜೈ ಜೈ ವಾಸುದೇವ ಹರಿ ।
ಜೈ ಜೈ - ಶಂಕರ ತ್ರಿಪುರಾರೀ । ಜೈ ಜೈ ಅಂಗಜಮದಹಾರಿ ॥
ಜೈ ! ಜೈ ! ಶ್ರೀಮತ್ಪ್ರಮಾರಮಣ ಗೋವಿಂದ ಗೋವಿಂದ ।
ಜೈ ! ಜೈ ! ನಮಃ ಪಾರ್ವತೀ ಪತೇಹರಹರ ಮಹಾದೇವ ॥

ಈ ಪ್ರಪಂಚವೆಂಬುದೊಂದು ಮೂರುದಿನದ ಸಂತೆ ; ಇಲ್ಲಿ ವ್ಯಾಪಾರಕ್ಕಾಗಿ ಬಂದ ಚಿಕ್ಕಪುಟ್ಟ ಗ್ರಾಹಕರು ನಾವು. ಆದರೆ ಈ ಸಂತೆಯಲ್ಲಿ ಹೊಕ್ಕು ನಾವು ಮಾಡಬೇಕಾದ ವ್ಯಾಪಾರ, ಪಡೆಯಬೇಕಾದ ವಸ್ತುಗಳನ್ನು ಮರೆತು ಸಂತೆಯಲ್ಲಿ ಹರಡಿರುವ ಆಕರ್ಷಕ ವಸ್ತುಗಳ ಮೋಹದಲ್ಲಿ ಸಿಕ್ಕು ಒದ್ದಾಡುತ್ತ ನಿಂತಿದ್ದೇವೆ; ಈ ಮರವೆಯಲ್ಲಿ ಬೆರೆತ ನಮಗೆ ಜನ್ಮ ಜನ್ಮಾಂತರಗಳೇ ಕಳೆದುಹೋಗಿವೆ ; ಯುಗಯುಗಾಂತರವೇ ಸಂದು ಹೋಗಿದೆ ; ಆದರೂ ಇನ್ನೂ ಅರಿವು ಮೂಡಿಲ್ಲ ; ತಿಳಿವು ಬಂದಿಲ್ಲ. ಆದರೆ ಪರಮಾತ್ಮನೂ ಕೂಡ ಒಬ್ಬ ವ್ಯಾಪಾರಿಯೇ ಎಂಬುದನ್ನು ಯಾರೂ ಮರೆಯಲಾಗದು. ಆತನು ಅಹರ್ನಿಶವೂ ಲೋಗರುಗಳ ಪಾಪಪುಣ್ಯದ ಅಳತೆಯನ್ನು ಮಾಡುತ್ತಲೇ ಇರುತ್ತಾನೆ ; ಭಕ್ತನ ಹೃದಯದ ಆಳವನ್ನು ಅಳೆಯುತ್ತಲೇ ಇರುತ್ತಾನೆ. ಇದನ್ನೇ ಸಂತ ಕಬೀರರು ಒಂದು ಕಡೆಯಲ್ಲಿ ಹೀಗೆ ಹೇಳಿದ್ದಾರೆ—

**ದೋಹಾವಲಿ—**

ಸಾಯಿ ಮೇರಾ ಬಾನಿಯಾ ಸಹಜಕರೈ ದೇಪಾರ ।
ಬಿನದಾಂಡಿ, ಬಿನಪಾಲಡೇ ತೌಲ ಸಬ್ ಸಂಸಾರ ॥

ಅಂದರೆ—ಅಪ್ಪಾ ನನ್ನ ಒಡೆಯನು ಬಹಳ ಸರಳವಾದ ರೀತಿಯಲ್ಲಿ ವ್ಯಾಪಾರ ಮಾಡುತ್ತಿರುವನಪ್ಪಾ ; ಆತನು ದೊಡ್ಡ ವರ್ತಕನಪ್ಪಾ. ಅವನು ತಕ್ಕಡಿ, ಕಲ್ಲು ಯಾವುದೂ ಇಲ್ಲದೇ ಎಲ್ಲಾ ಜೀವರುಗಳ ಪಾಪಪುಣ್ಯಗಳನ್ನೇ ತೂಗುತ್ತಿರುವನಪ್ಪಾ ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ....ಅರ್ಥಾತ್ ಕಾಸಿಗೆ ತಕ್ಕ ಕಜ್ಜಾಯವೆನ್ನುವಂತೆ ನಮ್ಮ ನಮ್ಮ ಭಕ್ತಿ ಕ್ರಿಯೆಗಳಿಗೆ ತಕ್ಕಂತಹ ಫಲವನ್ನು ಆತನು ಕೊಡುತ್ತಾನೆ ಎಂದು ; ಆದುದರಿಂದ ನಾವೆಲ್ಲರೂ ಭಕ್ತಿಯಿಂದ ಕೂಗುವುದನ್ನು, ಶ್ರದ್ಧೆಯಿಂದ ಸತ್ಕರ್ಮ ಮಾಡುವುದನ್ನು ಕಲಿಯುವ ; ಆಗ ನಮ್ಮ ಕಲ್ಯಾಣವಾಗುತ್ತದೆ. ಆದುದರಿಂದಲೇ ಅಣ್ಣ ಬಸವಣ್ಣನವರು—

ವಚನ—

ರಾಗ–ಶಂಕರಾ. ತಾಲ - ಝುಪ್.

ನಂಬಿನೀ ಕರೆದಡೆ ಓ ಎಂಬ ಶಿವನು ; ನಂಬದೇ ಕರೆದಡೆ "ಓ" ಎಂಬನೇ ಶಿವನು ? ನಂಬಲರಿಯರು, ನಚ್ಚಲರಿಯರು, ಡಾಂಭಿಕರು ; ನಂಬದೆ, ನೆಚ್ಚದೆ ಬರಿದೆ ಕರೆದಡೆ ಶಿವನು ಮೌನದಲ್ಲಿಪ್ಪನಮ್ಮ ಕೂಡಲಸಂಗಮದೇವಾ—

ಎಂಬುದಾಗಿ ಸಾರಿದ್ದಾರೆ. ಇರಲಿ ಪ್ರಸ್ತುತ ಈಗ ಪೀಠಿಕಾ ವಿಭಾಗದಲ್ಲಿ " ಸರ್ವಂ ಖಲ್ವಿದಂ ಬ್ರಹ್ಮ " ಎಂದೆನ್ನುವ ಬ್ರಹ್ಮತತ್ವದ ಸರ್ವವ್ಯಾಪಕತೆಯನ್ನು ಪ್ರಸ್ಥಾಪಿಸುತ್ತ ಈಗ " ಏಕಂ ಸದ್ವಿಪ್ರಾಃ ಬಹುಧಾವದಂತಿ " ಎಂದೆನ್ನುವಂತೆ ಬಹುನಾಮ ಬಹುರೂಪಗಳಾದ ದೇವರಲ್ಲೇ ಏಕತ್ವವನ್ನು ಕಂಡು ಪುಣ್ಯಚರಿತಳಾದ **ಹೆಳವನಕಟ್ಟೆ ಸಂತ ಗಿರಿಯಮ್ಮ**ನ ಕಥೆಯನ್ನು ನಿರೂಪಿಸಲಾಗುತ್ತದೆ.



# ವ್ಯಾಖ್ಯಾನ

**ಸೂಚನೆ—**

ಆರ್ಯಾ—

ಬಿಷ್ಟದೀಕ್ಷಿತನೆಂಬೋರ್ವನು ದ್ವಿಜ-
ಶ್ರೇಷ್ಠನಿರ್ದ ರಾಣೆಬೆನ್ನೂರಲಿ ||
ಇಷ್ಟ ದೇವತೆಯ ಪೂಜೆಯ ಫಲದಲಿ
ಹುಟ್ಟ ಮೆರೆದಳ್ಗಿರಿಯಮ್ಮ ಅಲ್ಲೀ...............

ಯಾವ ಈ ನಮ್ಮ ಕನ್ನಡನಾಡಿನ ಬಡಗು ದಿಶೆಯಲ್ಲಿರುವ ರಾಣೇಬೆನ್ನೂರೆಂಬ ನಗರದಲ್ಲಿ ಈಗ್ಯೆ ಸುಮಾರು ಎರಡು ಶತಮಾನಗಳ ಹಿಂದೆ ಬಿಷ್ಟ ದೀಕ್ಷಿತರೆಂಬ ವೇದಾಧ್ಯಯನ ಸಂಪನ್ನರಾದ ಓರ್ವ ಬ್ರಾಹ್ಮಣೋತ್ತಮರು ಜೀವಿಸಿದ್ದರು. ಅವರು ಸದ್ಗುಣಭರಿತರೂ, ಭಗವದ್ಭಕ್ತರೂ ಆಗಿದ್ದು ನಿತ್ಯಾನುಷ್ಠಾನಪರರಾಗಿದ್ದರು. ಅವರ ಕುಲದೇವತೆಯಾದ ಮೈಲಾರ ಲಿಂಗನ ಅನುಗ್ರಹದಿಂದ ಬಿಷ್ಟಪ್ಪನವರಿಗೆ ಒಂದು ಕನ್ಯಾರತ್ನವು ಜನಿಸಿತು. ಅದಕ್ಕೆ ದೀಕ್ಷಿತರು ಗಿರಿಯಮ್ಮನೆಂದು ನಾಮಕರಣವನ್ನು ಮಾಡಿ ವಾತ್ಸಲ್ಯ ದಿಂದ ಪೋಷಿಸುತ್ತ ಬಂದರು. ಗಿರಿಯಮ್ಮನು ಮನೆಯ ಕುಡಿದೀಪವಾಗಿ ಸುತ್ತಣ ಜನರ ಕಣ್ಮಣಿಯಾಗಿ ಬೆಳೆಯುತ್ತಿರಲು ಬಿಷ್ಟಪ್ಪನವರು ಮಗುವಿನ ಬಾಲಲೀಲೆಯನ್ನು ಕಂಡು ಸಂತಸದಿಂದ ನಲಿದಾಡುತ್ತಿದ್ದರು. ಒಮ್ಮೊಮ್ಮೆ ತಮ್ಮ ನಿತ್ಯಾನುಷ್ಠಾನಗಳನ್ನೇ ಮರೆತು ಮಗುವಿನ ಸುಕೋಮಲವಾದ ವದನಾರವಿಂದವನ್ನೇ ನಿರೀಕ್ಷಿಸುತ್ತ ಮೈಮರೆತು ಕುಳಿತು ಬಿಡುತ್ತಿದ್ದರು. ಆಗ ಯಾರಾದರೂ ನೆರೆಯವರು ಬಂದು ಈ ದೃಶ್ಯವನ್ನು ನೋಡಿ— ಏನಪ್ಪಾ ದೀಕ್ಷಿತರೇ-ಇದೇನಿದು ನಿಮ್ಮದೀ ವ್ಯಾಮೋಹ ಆ ಮಗುವಿನಲ್ಲಿ ........ಅದಾದರೂ ಮುದ್ದುಮಾಡಲು ಗಂಡೇ ? ಹೆಣ್ಣು........ಆ ಹೆಣ್ಣು ಕೂಸಿನಲ್ಲಿ ಇಷ್ಟೊಂದು ಅಕ್ಕರೆಯೇ ಎಂದು ಮೂದಲಿಸಿದರೆ ಬಿಷ್ಟಪ್ಪನವರು ನಗುತ್ತ-ಅಪ್ಪಾ—

ಜಾನಪದ ಗೀತೆ—

ಹೆಣ್ಣು ಹುಟ್ಟಿತು ಎಂದು ಮೂಗಾ ಮುರಿಯದಿರಣ್ಣಾ–
ಹೆಣ್ಣೆ ತಾನೆರಡು ಸಂಸಾರ ಕುಲದೀಪ–
ಹೆಣ್ಣೆ ತಾನೆರಡು ಸಂಸಾರ ಕುಲದೀಪ–
ಹೆಣ್ಣಿರದಾ ಮನಿಯದು ಮನೆಯಲ್ಲ ಮಸಣಣ್ಣಾ ||

ಎಂಬುದಾಗಿ ಜಾನಪದ ಗೀತೆಯನ್ನು ಹಾಡುತ್ತ ಮಗುವನ್ನು ಬಿಗಿದಪ್ಪಿ ಮುದ್ದಿಟ್ಟು ಎದೆಗವಚಿಕೊಂಡು ಅಲ್ಲಿಂದ ಹೊರಟುಬಿಡುತ್ತಿದ್ದರು. ಆಗಿನ ಕಾಲದಲ್ಲಿ ಇಂದಿನ ಸಮಾಜದಲ್ಲಿರುವಂತೆ ಒಂದು ಹೆಣ್ಣು ಮನೆಯಲ್ಲಿ ಜನಿಸಿದರೆ ಅದು ಜನ್ಮಾಂತರದ ಪಾಪದ ಫಲವೆಂದ, ತಿಳಿಯುವಷ್ಟು ಅಧೋಗತಿಯು ಇರಲಿಲ್ಲವೋ ಏನೋ; ವರಾನ್ವೇಷಣೆ, ಮದುವೆ ಎಂದರೆ ಇಂದಿನ ವ್ಯಾಪಾರೀ ಧರ್ಮಕ್ಕಿಳಿದಿಲ್ಲವೆಂದು ತೋರುತ್ತದೆ. ವಿವಾಹವೆಂದರೆ ಅದೊಂದು ಮಂಗಲಕಾರ್ಯ; ಹಾಗೆಯೇ ಹೆಣ್ಣೆಂದರೆ ತನ್ನ ಹುಟ್ಟಿದ ಮನೆಯನ್ನೂ ಸೇರಿದ ಸಂಸಾರವನ್ನೂ ಪಾವನಗೊಳಿಸುವ ಪಾವನಮೂರ್ತಿ ಎಂಬ ಭಾವನೆ ಇದ್ದಿರಬೇಕು........ಇರಲಿ....ಪ್ರಸ್ತುತ ಗಿರಿಯಮ್ಮನು ತನ್ನ ತಾಯಿ ತಂದೆಯರ ಪ್ರೇಮದ ಮಡಿಲಲ್ಲಿ ಅಕ್ಕರೆಯಿಂದ ಬೆಳೆದು ಮುದ್ದಿನ ಮಣಿಯಾಗಿ ಸದ್ಗುಣಗಳ ಖನಿಯಾಗಿ ವಿರಾಜಿಸುತ್ತಿದ್ದಳು. ಪೂರ್ವ ಜನ್ಮದ ಸಂಸ್ಕಾರ ವಿಶೇಷದಿಂದ ಭಗವದ್ಭಕ್ತಿಯು ಗಿರಿಯಮ್ಮನಿಗೆ ರಕ್ತಗತವಾಗಿ ಬಂದಿದ್ದಿತು. ಅವಳು ತನ್ನ ಸಂಗಾತಿಗಳಾದ ಗೆಳತಿಯರೊಡನೆ ಮಾತನಾಡುತ್ತಿರುವಾಗಲೂ ಆಟವಾಡುವಾಗಲೂ ಪರಮಾತ್ಮನ ವಿಷಯವನ್ನಲ್ಲದೆ ಅನ್ಯವಿಚಾರಗಳನ್ನೇ ಪ್ರಸ್ತಾಪಿಸುತ್ತಿರಲಿಲ್ಲ.... ...ಹೀಗಿರುವಲ್ಲಿ ಒಂದು ದಿನ ಮಾತಿಗೆ ಮಾತು ಬೆಳೆದು ದೇವರುಗಳಲ್ಲಿ ಹರಿಯೇ ಶ್ರೇಷ್ಠ ಎಂಬುದಾಗಿ ಒಂದು ತಂಡದವರು ವಾದಿಸಿದರೆ ಇಲ್ಲ ಹರನೇ ಶ್ರೇಷ್ಠ ಎಂಬುದಾಗಿ ಇನ್ನೊಂದು ಗುಂಪಿನವರು ತರ್ಕಕ್ಕೆ ನಿಂತರು; ಇವರೀ ತರ್ಕವನ್ನು ಕಂಡ ಗಿರಿಯಮ್ಮನು ಮಧ್ಯೆ ಪ್ರವೇಶಿಸಿ " ತಾಯಿರಾ ಸುಮ್ಮನೇ ಕಾದಾಡುವಿರೇಕೆ? ಹರಿಹರರಿಬ್ಬರೂ ನಾಮ ಮಾತ್ರದಿಂದ ಭಿನ್ನವಾಗಿ

ಕಂಡರೂ ಮೂಲತಹ ಈರ್ವರೂ ಒಂದೇ. ಆ ಒಂದೇ ಅವ್ಯಕ್ತ ಶಕ್ತಿಯಾದ ಪರಬ್ರಹ್ಮನಿಗೆ ಹಲವರು ಹಲವು ಹೆಸರುಗಳನ್ನಿಟ್ಟು ಕರೆದಿದ್ದಾರಲ್ಲದೆ ಅಂತರ್ಯದಲ್ಲಿ ಏನೂ ಭೇದವಿಲ್ಲವೆಂಬುದಾಗಿ ಸರಳವಾದ ಸಮಾಧಾನೋಕ್ತಿಯಿಂದ ಸಂತೈಸುತ್ತ—

**ವಚನ—**

ರಾಗ–ಮಿಶ್ರಗಾರಾ ತಾಲ–ಖೇಮ್ಟಾ

ಹರಿ ಎಂದರೆ ಶಿವ ಭಕುತಗೆ ಮುನಿಸು |
ಹರನೆಂದರೆ ಹರಿದಾಸಗೆ ಮುನಿಸು |
ಹರಿಯೇ ಎನಲೀ, ಹರನೇ ಎನಲೀ |
ಪರಬ್ರಹ್ಮನೊ ಜಗದಂಬೆಯೊ ಎನಲೀ |
ಪರಿಪರಿ ಕರೆಯಲಿ ಅದಕೇನಂತೆ? |
ದೇವನೊಬ್ಬನೇ ನಾಮವು ಹಲವು- ‖ ೧ ‖
ಇರುವುದೊಂದೆ ಅವ್ಯಕ್ತದ ಶಕ್ತಿಯು |
ತುಂಬಿದೆ ಹೊರ ಒಳಗೆಲ್ಲವು ನೆುತ್ತಿ |
ಅರಿತಿದ ಶ್ರೀ ಪರಮೇಶದಾಸತಾ |
ಬೆರೆತಿಹ ನಿರುತದಿ ಸಕಲರ ಕೂಡಿ ‖ ೨ ‖

ಎಂಬುದಾಗಿ ಹೇಳಲಾಗಿ ಎಲ್ಲರೂ ಗಿರಿಯಮ್ಮನ ಆಧ್ಯಾತ್ಮಿಕ ಪ್ರೌಢಿಮೆಯು ವಾದ ಸರಣಿಯನ್ನೊಪ್ಪಿ ಸುಮ್ಮನಾದರು. ಹೀಗೆ ಗಿರಿಯಮ್ಮನು ಬಾಲ್ಯದಿಂದಲೇ ಜ್ಞಾನಸಂಪನ್ನಳಾಗಿ ಬೆಳೆಯುತ್ತಿರಲು ಆವಳಿಗೆ ಯೌವನವು ಪ್ರಾಪ್ತವಾಯ್ತು ; ಆಗ ಬಿಷ್ಟದೀಕ್ಷಿತರ—

**ಚೌಪದಿ—**

ಕುವರಿಗನುರೂಪಾದ ವರನನು ಹುಡುಕೆ ನಿಜಪಿತಯೋಚಿಸಿ |
ಬರದೆ ಬಂದನು ತಿರುಗುತಾತನು ನೆರೆವ ಮಲಿಬೆನ್ನೂರಿಗೆ ‖
ಅರಸಿ ತಿಪ್ಪರಸೆಂಬ ಗುಣಯುತ ವರನನೊಪ್ಪಿಸಿ ಪ್ರೇಮದೇ |
ವಿರಚಿಸಿದನವ ಲಗ್ನವನೆ ಬುಧ ಜನರ ಕರುಣ ಕಟಾಕ್ಷದೆ ‖........

ಹೀಗೆ ಮಲೆಬೆನ್ನೂರಿನ ಶ್ರೀಮಂತ ಮನೆತನದ ತಿಪ್ಪರಸನೆಂಬ ಯುವಕನನ್ನು ಹುಡುಕಿ ಮಗಳಿಗೆ ಮದುವೆಯನ್ನು ಮಾಡಲಿಕ್ಕಾಗಿ ಉಭಯ ಕುಲದವರೂ ಸಂತೋಷಭರಿತರಾಗಿದ್ದಾರೆ. ಈ ಲಗ್ನ ಸಮಾರಂಭಕ್ಕೆ ಮಲೆಬೆನ್ನೂರಿಂದ ಬಂದ ನೆಂಟರಿಷ್ಟರ ಬಾಯಿಂದ ಮಲೆಬೆನ್ನೂರಿಗೆ ಸಮೀಪದಲ್ಲಿರುವ ಕೊಮಾರನಹಳ್ಳಿಯಲ್ಲಿ ನೆಲಸಿ ಬಹು ಜಾಗ್ರತಸ್ಥಾನವೆಂದು ಪ್ರಖ್ಯಾತವಾಗಿರುವ ಹೆಳವನಕಟ್ಟೆ ರಂಗನಾಥಸ್ವಾಮಿಯ ವಿಚಾರವನ್ನು ಕೇಳಿದ ಗಿರಿಯಮ್ಮನು ಅಂದೇ ಆತನಲ್ಲಿ ನೆಟ್ಟ ಮನಸ್ಸುಳ್ಳವಳಾದಳು. ಇದಾದ ಕೆಲವು ದಿವಸಕ್ಕೇ ಗಿರಿಯಮ್ಮನು ಋತುಮತಿಯಾಗಲಿಕ್ಕಾಗಿ ಆಕೆಯ ನೆಂಟರಿಷ್ಟರೂ, ಹಿರಿಯರೂ ಅವಳನ್ನು ನಿಷೇಕ ಪ್ರಸ್ಥಕ್ಕಾಗಿ ಮಲೆಬೆನ್ನೂರಿಗೆ ಕರೆದೊಯ್ದರು. ಈ ಸನ್ನಿವೇಶವನ್ನೇ ಇದಿರು ನೋಡುತ್ತಿದ್ದ ಗಿರಿಯಮ್ಮನು ಅಲ್ಲಿಗೆ ತಲಪುತ್ತಲೇ ತನ್ನ ಸಂಗಾತಿಗಳೊಡನೆ ಅತ್ತೆ ಮಾವಂದಿರ ಅಪ್ಪಣೆಯನ್ನು ಪಡೆದು ಎಂದಿನಿಂದಲೋ ತನ್ನ ಮನಸ್ಸನ್ನಾಕರ್ಷಿಸಿದ್ದ ಹೆಳವನಕಟ್ಟೆಯ ರಂಗನಾಥಸ್ವಾಮಿಯನ್ನು ನೋಡಲಿಕ್ಕಾಗಿ ಹೋಗಿದ್ದಾಳೆ. ಅಲ್ಲಿ ಸ್ವಾಮಿಯನ್ನು ನೋಡುತ್ತಲೇ ಅವಳಿಗೆ ಭಕ್ತಿಯು ಉಕ್ಕಿ ಬಂದು ಅವಳು ಭಾವಪರವಶಳಾಗಿ ವೈಮರೆತಿದ್ದಾಳೆ; ಹೃದ[illegible]ಸ ಆನಂದವು ತೊರೆಯಾಗಿ ಹರಿದು ಬಂದು ಅವಳ ನೇತ್ರಯುಗ್ಮಗಳಿಂದ ಆನಂದಬಾಷ್ಪವು ಧಾರಾಕಾರವಾಗಿ ಸುರಿಯತೊಡಗಿದೆ....ಆಗ ಅವಳು ಹಾಡತೊಡಗಿದ್ದಾಳೆ—

ರಾಗ–ಯಮುನ್. ತಾಲ–ದಾದರಾ.

ಧನ್ಯಳಾದೆ ರಂಗನಾಥನಾ | ಕಣ್ಣಾರೆ ಕಂಡು || ಪ ||
ಧನ್ಯಳಾದೆನೆಂದು ನಾನು | ಎನ್ನ ಪಾಪ ಅಳಿಯಿತಿನ್ನು |
ಘನ್ನತಿರುಪತೀಯವಾಸ | ಶ್ರೀನಿವಾಸ ನೀ ರಂಗನಾಥ || ಪ ||
ವೆಂಕಟಾದ್ರಿ ವಾಸನೆಂದು | ಲೆಂಕನೀಗೆ ಒಲಿದು ಬಂದು |
ಕಿಂಕರಾರ ಸಲಹಲೆಂದು | ಬಿಂಕದಿಂದ ನಿಂತೆಯಾ ||
ಪಂಕಜಾಕ್ಷ ಪರಮಪುರುಷ (ನಿ) ಶ್ಶಂಕೆಯಿಂದ ನಿನ್ನ ನಾಡ್ದೆ |
ಕೊಂಕುಬಿಡಿಸಿ ಎನ್ನ ಕಾಯೋ | ಶಂಕರಾರ್ಚಿತಾ || ೧ ||

ಶಿಲೆಯ ತುಳಿದು ಲಲನೆಗೈದೆ । ಬಲಿಯ ಮೆಟ್ಟಿಕೊಟ್ಟೆ ಪದವ ॥
ಇಳೆಯೊಳನ್ಯ ಬಯಸೆನಯ್ಯ । ನಿನ್ನ ಒಲುಮೆಯಲ್ಲದೇ ॥
ತಿಳಿಯಲಾರೆನಯ್ಯ ದೇವ । ಚೆಲುವ ನಿನ್ನ ಲೀಲೆ ಪೊಗಳೆ ।
ಬಳಲಿ ನಿಲ್ಲದಯ್ಯ ಜಿಂಹ್ವೆ । ನಳಿನನಾಭನೇ ॥ ೨ ॥
ಸಕಲ ಲೋಕದೊಡೆಯ ನೀನು । ಅಖಿಲಶಾಸ್ತ್ರ ಮೂಲನಯ್ಯ ।
ಭಕುತಕೋಟಿ ಹೃದಯವಾಸ । ವೆಂಕಟಾಚಲಾ ॥
ಮುಕ್ತಿದಾತ ನೀನೆ ಈಶ । ಶಕ್ತನಯ್ಯ ನೀ ಸ್ವತಂತ್ರ ।
ರಿಕ್ತಳಾ ಪರಮೇಶದಾಸಿ । ಭಕ್ತ ಬಂಧುವೇ ॥ ೩ ॥

ಹೀಗೆ ಎಷ್ಟೋ ಹೊತ್ತು ಪರಮಾತ್ಮನ ಸ್ತೋತ್ರ ಮಾಡುತ್ತ ನೈಮರೆತು ಕುಳಿತಿದ್ದ ಗಿರಿಯಮ್ಮನನ್ನು ಸಂಗಡಿಗರು ಎಬ್ಬಿಸಿ ಬಲಾತ್ಕಾರದಿಂದಲೇ ಮನೆಗೆ ಕರೆದೊಯ್ದಿದ್ದಾರೆ. ಅಲ್ಲಿ ನಿಷೇಕ ಪ್ರಸ್ಥಕ್ಕೆ ಪೂರ್ವಭಾವಿಯಾಗಿ ನಡೆಯಬೇಕಾಗಿದ್ದ ಶಾಸ್ತ್ರೋಚಿತವಾದ ಕಾರ್ಯಗಳೆಲ್ಲಾ ಸುಗಮವಾಗಿ ನಡೆದಿವೆ. ರಾತ್ರಿ ಶೃಂಗರಿಸಿದ ಕೊಠಡಿಯಲ್ಲಿ ಗಿರಿಯಮ್ಮನು ಏಕಾಂಗಿಯಾಗಿ ಕುಳಿತು ವ್ಯಾಕುಲತೆಯಿಂದ ಹೇಳತೊಡಗಿದ್ದಾಳೆ. " ಪರಮಾತ್ಮ ಇದುವರೆಗೂ ನಿನ್ನ ಸೇವೆಗಾಗಿಯೇ ಮುಡುಪಾಗಿರಿಸಿದ ಈ ನನ್ನ ಪುಣ್ಯಶರೀರವು ಇಂದು ಸಂಸಾರದ ಬಂಧನಕ್ಕೊಳಗಾಗಿ ಅನ್ಯರ ಪಾಲಾಗಬೇಕೇ ? ನನ್ನ ಸೇವೆಯು ನಿನಗೆ ಬೇಡವೆನಿಸಿತೇ ? ನನ್ನ ಪೂಜೆಯನ್ನು ನೀನು ಒಪ್ಪ-ದಾದೆಯಾ ? ಎಂದು ಗದ್ಗದಿತಳಾಗಿ ಮೊರೆ ಇಡುತ್ತ ತನ್ನ ಔಪಾಸನಾ ದೇವತೆಯಾದ ರಂಗನಾಥನನ್ನು ಹೀಗೆ ಪ್ರಾರ್ಥಿಸತೊಡಗಿದ್ದಾಳೆ—

ರಾಗ–ಜೀವನಪುರಿ. ತಾಲ–ಖವಾಲಿ.

ಕಡೆಗಣ್ಣಲಿ ನೀ ನೋಡದಿರೆನ್ನಯ್ಯಾ । ಬಿಡಬೇಡವೊ ಕೈಯ್ಯಾ ॥
ಬಡವರ ಬಂಧು ಬಹುಕೃಪೆ ಸಿಂಧು ।
ಒಡೆಯ ನೀನಲ್ಲದೆ ನಮಗೆ ಬ್ಯಾರಿಲ್ಲವೊ ॥ ಪ ॥
ಶತ ಅಪರಾಧವ ಮಾಡಿದೆನಯ್ಯಾ । ಸೇರಿದೆ ನಾ ನಿನ್ನ ಬೆನ್ನಾ ।

ಅತಿಪಾತಕಿ ಅಜಮಿಳನ ಉದ್ಧರಿಸಿದ |
ಪೃಥಿವಿಯೊಳಗೆ ಬಿರುದಾಂತ ಶ್ರೀಕಾಂತ ॥ ೧ ॥
ನೆಲೆಗಾಣದೆ ನಾನಾ ಪರಿಚಿಂತಿಸಿ | ಒಳಗಾದೆನೋ ಹೀಗೇ |
ಬಳಲಿಸಬ್ಯಾಡವೊ ಭಕ್ತಕುಟುಂಬಿ |
ನಳಿನದಳಾಂಬಕ ನೀ ಸಲಹೆನ್ನನು ॥ ೨ ॥
ಸಾರಿ ಹೇಳುವೆ ಎನ್ನಯ ಬಳಗದ ಆಧಾರ ನಿನ್ನದು |
ಹೇರೊಪ್ಪಿಸಿದ ಮ್ಯಾಲ್ಯಾತರ ಸುಂಕವು |
ಕಾರುಣ್ಯನಿಧಿ ಹೆಳವನಕಟ್ಟೆ ರಂಗಯ್ಯ ॥ ೩ ॥

ಹೀಗೆ ಪ್ರಾರ್ಥಿಸುತ್ತ ಕುಳಿತಿರಲಿಕ್ಕಾಗಿ ಅಲ್ಲಿಗೆ ಅವಳ ಪತಿಯಾದ ತಿಪ್ಪರಸನು ತನ್ನ ಮನಸ್ಸಿನಲ್ಲೇ ಸುಂದರವಾದ ಕನಸನ್ನು ಕಾಣುತ್ತ ಬಂದು ಶಯ್ಯಾ-ಗಾರವನ್ನು ಪ್ರವೇಶಿಸಿ ಅಲಂಕೃತವಾದ ಮಂಚದ ಕಡೆಗೆ ಹೋಗಿ ನೋಡು ತ್ತಾನೆ. ಅಲ್ಲಿ ಹಾಸಿಗೆಯ ಮೇಲೆ ತನ್ನ ಪ್ರೇಯಸಿಯಾದ ಗಿರಿಯಮ್ಮನ ಬದಲು ಹೆಡೆಬಿಚ್ಚಿ ಬುಸುಗುಟ್ಟುತ್ತ ನಿಂತಿರುವ ಘಟಸರ್ಪವು ಆತನಿಗೆ ಕಾಣುತ್ತದೆ. ಆಗ ಆತನು ಒಮ್ಮೆಗೇ ಹಾಹಾಕಾರ ಚೀರುತ್ತ ಹೊರಕ್ಕೆ ಓಡಿಬಂದು ತನ್ನ ಹಿರಿಯರಿಗೆ ತಿಳುಹಿಸಲಿಕ್ಕಾಗಿ ಅವರು ಬೇರೆ ಕೊಠಡಿ ಯನ್ನು ವ್ಯವಸ್ಥೆಪಡಿಸಿದ್ದಾರೆ ; ಅಲ್ಲೂ ಹಿಂದಿನಂತೆಯೇ ನಡೆದಿದೆ ; ಹೀಗೆ ಒಂದಲ್ಲ ಎರಡಲ್ಲ ನಾಲ್ಕೆಂಟು ಕೋಣೆಗಳನ್ನು ಬದಲಿಸಿದರೂ ಇದೇ ವಿಚಿತ್ರವಾದ ಘಟನೆಯು ಸಂಘಟಿಸಲಾಗಿ ತಿಪ್ಪರಸನಿಗೆ ಜ್ಞಾನೋದಯ ವಾಗಿದೆ. ಆಗ ಆತನು ಗಿರಿಯಮ್ಮನು ಸಾಮಾನ್ಯಳಾದ ಮನುಷ್ಯ ಮಾತ್ರ ಳಲ್ಲ-ದೇವಾಂಶಸಂಭೂತಳೇ ಎಂದು ನಿರ್ಧರಿಸಿ ಸುಮ್ಮನಾಗಿದ್ದಾನೆ. ಇದಾದ ಕೆಲವು ದಿನಗಳ ಬಳಿಕ ಗಿರಿಯಮ್ಮನ ಅತ್ತೆ ಮಾವಂದಿರು ತಮ್ಮ ಮಗನಾದ ತಿಪ್ಪರಸನಿಗೆ ಬೇರೆ ವಿವಾಹವನ್ನೇರ್ಪಡಿಸಬೇಕೆಂದು ಯೋಚಿಸಿ ಕನ್ಯಾನ್ವೇಷಣಕ್ಕೆ ತೊಡಗಿದ್ದಾರೆ. ಅವರೆ ಎರಡನೆಯ ಮದವೆ ಎಂದಾ ಕ್ಷಣವೇ ಎಷ್ಟೋ ಜನ ಕನ್ಯಾಪಾತ್ರಗಳು ಹಾಗೆಯೇ ಹಿಂದಕ್ಕೆ ಸರಿದಿದ್ದಾರೆ; ಇದು ಸಮಾಜದ ನಿಯಮ : ಎರಡನೆಯ ಮದುವೇ ಎಂದರೆ ವರನ್ನು

ಪ್ರಾಯಕಳೆದಂತಹ, ಮುದುಕ—ಎಂಬ ಭಾವನೆ; ಇಂತಹನಿಗೆ ಯಾರಾದರೂ ಹೆಣ್ಣನ್ನು ಕೊಡುತ್ತಾರೆಯೇ? ಆದರೆ ವರನಲ್ಲಿರುವ ಸಂಪತ್ತಿನ ಆಶೆಯಿಂದ ಯಾರಾದರೂ ಹೆಣ್ಣನ್ನು ಕೊಟ್ಟಾರು; ಆದುದರಿಂದಲೇ ಒಬ್ಬ ಜಾನಪದ ಕವಿಯು ಹೀಗೆ ಹಾಡಿದ್ದಾನೆ—

ತುಪ್ಪ ಹುಗ್ಗಿಯ ತಂದು ತಿಪ್ಪೇಲಿ ಎಸೆಯುವರೇ–
ಒಪ್ಪಾದ ಹೆಣ್ಣಿಯ್ದು ಮುದುಕಾಗೆ ಇತ್ತರೇ–
ಒಪ್ಪಾದ ಹೆಣ್ಣಿಯ್ದು ಮುದುಕಾಗೆ ಇತ್ತರೇ–
ತಿಪ್ಪಗಾದೀತಾ ಸಂಸಾರಾ ||........ಎಂದು

ಆದರೆ ಇಲ್ಲಿ ತಿಪ್ಪರಸನು ಮುದುಕನಲ್ಲ; ಇನ್ನೂ ಹರೆಯದ ಹುಡುಗ; ಆದ್ದರಿಂದ ಹುಡುಗಿಯನ್ನು ಮದುವೆ ಮಾಡಿಕೊಡಬಹುದಲ್ಲಾ ಎಂದರೆ— ಆ ಕವಿಯು ಮತ್ತೆ ಹೇಳುತ್ತಾನೆ..............

ಜಾಲೀಯ ಮರದಡಿಯ ನೆಳಲೀಗೆ ಹೋದ್ಹಂಗೇ–
ಮಲ ಮಕ್ಕಳಿದ್ದಲ್ಲಿ ಕೊಟ್ಟಾರೆ ಮಗಳ–
ಮಲ ಮಕ್ಕಳಿದ್ದಲ್ಲಿ ಕೊಟ್ಟಾರೆ ಮಗಳನ್ನೇ–
ಹೊಲೆಯರ ಕೇರಿಗೂ ಕಡೆಯಾ ಸಂಸಾರಾ ||....ಎಂಬುದಾಗಿ

ಆದರೆ ಇಲ್ಲಿ ಅದಕ್ಕೂ ಎಡೆ ಇಲ್ಲ;—ತಿಪ್ಪರಸನಿಗೆ ಮಕ್ಕಳೇ ಇಲ್ಲ....ಆದರೆ ಸವತಿ ಇರುವುದೇನೋ ನಿಜ; ಆದರೂ ಸವತಿ ಸವತಿಯೇ; ಈ ಕಾರಣದಿಂದಾಗಿಯೇ ಎಷ್ಟೋ ಮಂದಿ ಕನ್ಯಾದಾತೃಗಳು ತಮ್ಮ ಮಗಳನ್ನು ತಿಪ್ಪರಸನಿಗೆ ಮದುವೆ ಮಾಡಿಕೊಡಲು ಹಿಂದಕ್ಕೆ ಸರಿಯುತ್ತಿರುವುದನ್ನು ಕಂಡ ಗಿರಿಯಮ್ಮನು ತಾನೇ ಅವರನ್ನು ಸಂತೈಸಿ ಒಪ್ಪಿಸಿ ತನ್ನ ಪತಿಗೆ ಮರು ಮದುವೆಯನ್ನು ಮಾಡಿಸಿದ್ದಾಳೆ. ಈಗ ಗಿರಿಯಮ್ಮನು ನಿಶ್ಚಿಂತೆ. ಅನುದಿನವೂ ಅವಳು ಮನೆಯಲ್ಲಿ ತನ್ನ ಪಾಲಿನ ಕೆಲಸವನ್ನು ಮುಗಿಸಿಕೊಂಡು ಶ್ರೀ ರಂಗನಾಥನ ಸನ್ನಿಧಿಗೆ ಹೋಗಿ ಆತನ ಸೇವಾನಿರತಳಾಗಿರುತ್ತಿ

ದ್ದಳು. ಆದರೆ ಅವಳ ಹೃದಯದ ನಿರ್ಮಲ ಭಕ್ತಿ ಪ್ರೇಮಗಳನ್ನರಿಯದ ಅವಳ ನೆಂಟರಿಷ್ಟರಿಗೆ ಮಾತ್ರ ಇದು ಸರಿ ತೋರಲಿಲ್ಲ. ಅವರು ಗಿರಿಯಮ್ಮ ನನ್ನು ದೋಷೈಕ ದೃಷ್ಟಿಯಿಂದ ನೋಡತೊಡಗಿದರು; ಮನೆಯಲ್ಲಿ ಹೀಗಾದರೆ ಹೊರಗೆ ಮಾತ್ರ ಜನರೆಲ್ಲರೂ ಗಿರಿಯಮ್ಮನೊಬ್ಬ ದೇವಾಂಶ ಸಂಭೂತಳೆಂದೇ ಮಾನಿಸಿ ಭಯಭಕ್ತಿಯಿಂದ ನೋಡಿಕೊಳ್ಳುತ್ತಿದ್ದರು. ಗಿರಿಯಮ್ಮನು ಪಂಚಪಂಚ ಉಷಃಕಾಲದಲ್ಲೇ ಎದ್ದು ಸ್ನಾನಮಾಡಿ ಮಡಿಯುಟ್ಟು ರಂಗನಾಥನ ಸನ್ನಿಧಿಗೆ ಹೋಗಿ ಭಕ್ತ ಜನರು ತಂದಿತ್ತ ಮೊಸರನ್ನು ಭಾಂಡೆಯಲ್ಲಿ ಹಾಕಿ ಆನಂದದಿಂದ ಪರಮಾತ್ಮನನ್ನು ಸ್ತುತಿಸುತ್ತ ಅದನ್ನು ಕಡೆಯತೊಡಗುತ್ತಿದ್ದಳು. ಆ ಕಾಲದಲ್ಲಿ ಅವಳ ಬಾಯಿಂದ ಅಮರಸಂಗೀತದ ಅಮೃತ ಪ್ರವಾಹವೇ ಹರಿದು ಬರುತ್ತಿತ್ತು....ಅವಳು.....

ರಾಗ–ಮಿಶ್ರಮಾಲಕಂಸ್ ತಾಲ–ಖವಾಲಿ.

ವಲಿದು ಬಾ ರಂಗಯ್ಯಾ–ಸಲಿದು ಬಾ ರಂಗಯ್ಯಾ |
ಒಲಿ ಬಾ ನಲಿ ಬಾ–ನಲಿನಲಿಯುತ ಬಾ ‖ ಪ ‖

ಕೆನೆಮೊಸರನು ತೆಗೆದು ಇಟ್ಟಿಹೆ ನೋಡೋ |
ಬೆಣ್ಣೆ ಬೇಡವೊ ನಿನಗೆ ಒಂದು ಮಾತಾಡೋ ‖
ಘನಮಹಿಮನೆ ತಿಂದು ಎನ್ನ ಮುಂದಾಡೋ |
ನಿನಗೇನು ಬಂತಿಂದು ಇದು ಏನು ಕೇಡೋ ‖ ೧ ‖

ದನಗಾಹಿಗಳು ಬಂದು ಕಾಡುವರೆನ್ನಾ |
ನಿನಗಿಟ್ಟ ಪಾಲ್ಬೆಣ್ಣೆ ಕೊಡು ಎಂದು ಎನ್ನಾ ‖
ತಿನ್ನಯ್ಯ ನೀ ಮೊದಲೆ ಬಾ ಎನ್ನ ಚಿನ್ನಾ |
ಎನ್ನಯ್ಯ ಮೂಜಗದೆ ನೀನೆ ಸಂಪನ್ನಾ ‖ ೨ ‖

ಕಾಡಬೇಡವೊ ಬರಿದೆ ಬಾರೊ ರಂಗಯ್ಯಾ |
ಮಾಡಬೇಡವೋ ತಡನ ವೇಳೆ ಇಲ್ಲಯ್ಯಾ ‖
ಒಡೆಯ ನೀ ಪರಮೇಶದಾಸಳಾನಯ್ಯಾ |
ಕಡು ಚೆಲುವಿನಡಿ ಇಡುತ ಓಡಿಬಾರಯ್ಯಾ ‖ ೩ ‖

ಹೀಗೆಂದು—ಮೆಲುದನಿಯಿಂದ ಹಾಡುತ್ತ ಮೊಸರನ್ನು ಕಡೆಯ ತೊಡಗಿದರೆ ಹಿಂದಿನಿಂದಲೇ ಸ್ವಾಮಿಯು ಶಿಶುರೂಪದಿಂದ ಕುಣಿಕುಣಿಯುತ್ತ ಬಂದು ಗಿರಿಯಮ್ಮನಿಂದ ಬೆಣ್ಣೆಯನ್ನು ಬೇಡಿತಿಂದು ಆಯ್ದಿಟ್ಟ ಮೊಸರನ್ನು ಕುಡಿದು ತನ್ನ ಕೈಗಳನ್ನು ಆಕೆಯ ಸೀರೆಯ ಸೆರಗಿನಿಂದ ಉಜ್ಜಿಕೊಂಡು ಓಡಿಬಿಡುತ್ತಿದ್ದನು. ಹೀಗೆ ಪ್ರತಿದಿನವೂ ನಡೆಯುತ್ತಿರಲಿಕ್ಕಾಗಿ ಒಂದು ದಿನ ತನ್ನ ಸೊಸೆಯ ಚಾರಿತ್ರದಲ್ಲಿ ಸಂಶಯವನ್ನುಗೊಂಡ ಅವಳ ಮಾವನವರು ಒಮ್ಮೆ ಅವಳನ್ನು ಪರೀಕ್ಷಿಸಬೇಕೆಂದು ಅವಳನ್ನೇ ಹಿಂಬಾಲಿಸಿ ಬಂದು ದೂರದಿಂದಲೇ ನಿಂತು ನೋಡುತ್ತಿರಲಿಕ್ಕಾಗಿ ಈ ಎಲ್ಲ ವಿಚಿತ್ರ ಲೀಲೆಯನ್ನೂ ಕಂಡು ದಿಗ್ಭ್ರಾಂತರಾಗಿಬಿಟ್ಟಿದ್ದಾರೆ. ಆ ಸೌಂದರ್ಯದ ಪುತ್ಥಳಿ, ಕಡೆದಿಟ್ಟ ಬೊಂಬೆಯಂತಿರುವ ಆ ಸ್ವಾಮಿಯ ಆಕರ್ಷಕ ರೂಪುಲಾವಣ್ಯಗಳು ಅವರನ್ನು ಮಂತ್ರಮುಗ್ಧರನ್ನಾಗಿ ಮಾಡಿದೆ. ಅವರು ತಮ್ಮನ್ನೇ ತಾವು ಮರೆತು ಎಚ್ಚರತಪ್ಪಿಬಿದ್ದಿದ್ದಾರೆ; ಪುನಃ ಚೇತರಿಸಿಕೊಂಡು ಕಣ್ತೆರೆದು ನೋಡಿದರೆ ಅದೇ ಆ ಮಂಗಲಮೂರ್ತಿ! ಅದೇನು ಆ ಮೋಹಕತೆ! ಅದೇನು ಆ ಸ್ನಿಗ್ಧ ಸೌಂದರ್ಯ! ಹೌದು ಮಧುರ ಮೂರ್ತಿಯೇ ಅವನಲ್ಲವೇ? ಆದುದರಿಂದಲೇ ಶಾಸ್ತ್ರಕಾರರು ಪರಮಾತ್ಮನನ್ನು ಹೀಗೆ ವರ್ಣಿಸಿದ್ದಾರೆ.

ರಾಗ–ಝೂಂಡ್. ತಾಲ–ಖೇಮ್ಟಾ.

ಅಧರಂ ಮಧುರಂ-ವದನಂ ಮಧುರಂ।
ನಯನಂ ಮಧುರಂ-ಹಸಿತಂ ಮಧುರಂ।
ಹೃದಯಂ ಮಧುರಂ-ಗಮನಂ ಮಧುರಂ।
ಮಧುರಾಧಿಪತೇರಖಿಲಂ ಮಧುರಂ॥
ವಚನಂ ಮಧುರಂ ಚರಿತಂ ಮಧುರಂ।
ವಸನಂ ಮಧುರಂ-ವಲಿತಂ ಮಧುರಂ।
ಚಲಿತಂ ಮಧುರಂ ಭ್ರಮಿತಂ ಮಧುರಂ।
ಮಧುರಾಧಿಪತೇ ರಖಿಲಂ ಮಧುರಂ ॥ ೧ ॥

ಅಂದರೆ—ಪರಮಾತ್ಮನ ತುಟಿ, ಮುಖ, ಕಣ್ಣು, ನಗೆ, ಹೃದಯ, ನಡೆ-

ನುಡಿ, ಚರಿತೆ ಎಲ್ಲವೂ ಮೋಹಕವಂತೆ. ಅಂತಹ ಸ್ವಾಮಿಯನ್ನು ಕಂಡ ಆ ಮಾವನ ಪರಿಸ್ಥಿತಿಯು ಎಂತಿರಬಹುದು ? ಆತನು ತನ್ನ ಮೂರ್ಖತನಕ್ಕಾಗಿ ಪಶ್ಚಾತ್ತಾಪ ಪಟ್ಟವನಾಗಿ ತನ್ನ ಸೊಸೆಯಲ್ಲಿ ಕ್ಷಮಾಪಣೆಯನ್ನು ಬೇಡಿದ್ದಾನೆ. ಇದಾದ ಕೆಲವು ದಿನಗಳಲ್ಲೇ ಒಮ್ಮೆ ಮನೆಯಲ್ಲಿ ಕಟ್ಟಿಗೆ ಮುಗಿದಿದೆ ; ಆಗಲೇ ಸಂಜೆಯಾಗಿದೆ ; ರಾತ್ರಿ ಅಡಿಗೆಯಾಗಬೇಕು ; ಇಂತಹ ಸಂದಿಗ್ಧಸ್ಥಿತಿಯಲ್ಲಿ ಗಿರಿಯಮ್ಮನು ಅತ್ತೆಯ ಬಳಿ ಸಾರಿ ವಿನಮ್ರಳಾಗಿ " ಅತ್ತೆಯವರೇ ರಾತ್ರೆ ಅಡಿಗೆಗೆ ಕಟ್ಟಿಗೆ ಇಲ್ಲಾ " ಎಂದೆನ್ನಲಾಗಿ ಮೊದಲೇ ಸೊಸೆಯ ಮೇಲೆ ವಿಷಕಾರುತ್ತಿದ್ದ ಅವಳು ಕೃದ್ಧಳಾಗಿ " ಛೀ-ಛೀ-ಮುತ್ತಾಳೀ ! ಕಟ್ಟಿಗೆ ಇಲ್ಲವಾದರೆ ಈಗ ಹೇಳುವುದೇ ? ಮೊದಲೇ ತಿಳಿಸಲು ನಾಲಿಗೆ ಬಿದ್ದುಹೋಗಿತ್ತೇ ? ಕಣ್ಣು ಕುರುಡಾಗಿತ್ತೇ ? ಈಗೆಲ್ಲಿಂದ ಕಟ್ಟಿಗೆ ತರಲಿ ? ಹೋಗು ಹೋಗು ನಿನ್ನ ಕಾಲನ್ನೇ ಒಲೆಯಲ್ಲಿಟ್ಟು ಅಡಿಗೆ ಮಾಡು " ಎಂದು ಸಿಟ್ಟಿನಿಂದ ಗದರಿಸಲಿಕ್ಕಾಗಿ ಗಿರಿಯಮ್ಮನು ವಿನಯದಿಂದ ಹಸಾದವೆಂದು ಅಡಿಗೆಯ ಮನೆಯನ್ನು ಸಾರಿ ತನ್ನ ಕಾಲುಗಳನ್ನೇ ಒಲೆಯಲ್ಲಿಟ್ಟು ಆನಂದದಿಂದ ಪರಮಾತ್ಮನನ್ನು ಕೀರ್ತಿಸುತ್ತ ಅಡಿಗೆಗೆ ಪ್ರಾರಂಭಿಸಿದ್ದಾಳೆ. ಆಗ ಅವಳ ಪಾದದಿಂದ ಪುಟಿದೆದ್ದ ಪಾವಕನು ತನ್ನ ಪಾಕಕಾರ್ಯಕ್ಕೆ ತೊಡಗಿದ್ದಾನೆ. ತುಸುಹೊತ್ತಿನಲ್ಲೇ ಯಾವುದೋ ಕಾರ್ಯನಿಮಿತ್ತವಾಗಿ ಅಲ್ಲಿಗೆ ಬಂದ ಗಿರಿಯಮ್ಮನ ಅತ್ತೆಯು ಈ ವಿಚಿತ್ರವನ್ನು ಕಂಡು ಸ್ತಂಭೀಭೂತಳಾಗಿ ನಿಂತುಬಿಟ್ಟಿದ್ದಾಳೆ. ಆದರೆ ಗಿರಿಯಮ್ಮನು ಮಾತ್ರ ಇವ್ಯಾವುದರ ಪರವೆಯೂ ಇಲ್ಲದೇ ತನ್ಮಯತೆಯಿಂದ ಹಾಡುತ್ತಿದ್ದಾಳೆ—

ರಾಗ–ಕಾಪಿ. ತ್ರಿತಾಲ

ನಂಬಿದೆ ನಂಬಿದೆ ಅಂಬುಜಾಕ್ಷ ನಿನ್ನಾ |
ನಂಬಿದೆ ನಂಬಿದೆ ನಂಬಿದೆನ್ನಯ್ಯ || ಪ ||
ಮೊರೆಯಿಡೆ ದ್ರೌಪದಿ | ತ್ವರಿತದಿ ಪೋಗುತ |
ಪೊರೆದ ಮಹಾನುಭಾವ | ಮುರಹರ ನಿನ್ನ || ೧ ||

ಶಕ್ತನೆ ನಿನ್ನಯ | ಭಕ್ತಿಯಿಂ ಭಜಿಸುವೆ |
ಭಕ್ತರಿಗೆಲ್ಲಾ ನೀನು | ಮುಕ್ತಿಕೊಡುವೆ ಎಂದು || ೨ ||
ಧರೆಯೊಳು ರಾಜಿಪ | ವರಹೆಳವನಕಟ್ಟೆ |
ಗಿರಿಯೊಳು ನೆಲಸಿಹ | ಪರಮಪುರುಷರಂಗ || ೩ ||

ಭಜನ್—

ಶ್ರೀ ರಂಗನಾಥ ಶ್ರೀ ರಂಗನಾಥ–
ಶ್ರೀ ರಂಗನಾಥಾ – ಜೈ ಶ್ರೀ ರಂಗನಾಥ || ೧ ||

ಇಂತೆಂದು ಭಕ್ತಿಯಿಂದ ಮೈಮರೆತಿರುವ ಸೊಸೆಯನ್ನು ಕಂಡು ಅಪ್ರತಿಭಳಾದ ಅತ್ತೆಯು ಗಿರಿಯಮ್ಮನ ದೈವಿಕಶಕ್ತಿಯ ಪ್ರಭಾವವನ್ನು ಅರಿತಂಥವಳಾಗಿ ದೈನ್ಯತೆಯಿಂದ ತನ್ನನ್ನು ಕ್ಷಮಿಸುವಂತೆ ಪ್ರಾರ್ಥಿಸಿದ್ದಾಳೆ. ಗಿರಿಯಮ್ಮನಾದರೂ ಮೃದುವಚನಗಳಿಂದ ತನ್ನ ಅತ್ತೆಯನ್ನೇ ಸಂತೈಸಿ ಓಲೈಸಿದ್ದಾಳೆ. ಈ ವಿಚಾರಗಳನ್ನು ಕೇಳಿದ ಸಕಲರೂ ಗಿರಿಯಮ್ಮನನ್ನು ಹಾಡಿ ಹೊಗಳಿದರು. ಹೀಗಿರಲಿಕ್ಕಾಗಿ ಒಂದು ದಿನ ಗಿರಿಯಮ್ಮನ ಮಾವನವರು ಒಳಗೆ ಪೂಜೆಗೆ ಕುಳಿತಿದ್ದಾರೆ ; ಉಚ್ಚಸ್ವರದಿಂದ ಪಾರಾಯಣವು ನಡೆದಿದೆ ; ಮಂತ್ರವನ್ನು ಹೇಳುತ್ತಿದ್ದಾರೆ ; ಗಂಟೆಯನ್ನು ಬಾರಿಸುತ್ತಿದ್ದಾರೆ ; ಧೂಪದ ವಾಸನೆಯು ಮನೆ ಎಲ್ಲ ಹರಡಿ ನಿಂತಿದೆ. ಆಗ ಕುಂಬಾರನೊಬ್ಬನು ಬಂದು ಬೀದಿಯ ಬಾಗಿಲಲ್ಲಿ ನಿಂತು " ಏನು ತಾಯಿ ! ಯಾರವ್ವಾ ಒಳಗೆ ? ಒಳಗೆ ಕುಲಕರ್ಣಿಗಳಿದ್ದಾರೆಯೋ ?" ಎಂದು ಪ್ರಶ್ನಿಸಲಿಕ್ಕಾಗಿ ಅಲ್ಲೇ ಪಡಸಾಲೆಯಲ್ಲಿ ಅಕ್ಕಿಯನ್ನು ಆರಿಸುತ್ತ ಕುಳಿತಿದ್ದ ಗಿರಿಯಮ್ಮನು " ಅಪ್ಪಾ ನಮ್ಮ ಮಾವ, ನಿಮ್ಮ ನಾಡಿಗರು ಮನೆಯಲ್ಲಿಲ್ಲ—ಅವರು ಮಾದಿಗರ ಕೇರಿಗೆ ಜೋಡು ಮಾಡಿಸಲಿಕ್ಕಾಗಿ ಹೋಗಿದ್ದಾರೆ " ಎಂದು ಹೇಳಿಕಳುಹಿಸಲಿಕ್ಕಾಗಿ ಒಳಗೆ ಪೂಜಾಮಂದಿರದಲ್ಲಿದ್ದ ಶ್ಯಾನುಭೋಗರು ಇದನ್ನು ಕೇಳಿ ಹೊರಕ್ಕೆ ಬಂದು—"ಯಾಕೆ ಗಿರಿಯಮ್ಮಾ ನಾನು ಪೂಜೆಗೆ ಕುಳಿತಿರುವುದನ್ನು ನೀನು ನೋಡಲಿಲ್ಲವೇ ? ನಾನು ಅಷ್ಟೊಂದು ಗಟ್ಟಿಯಾಗಿ ಮಂತ್ರೋಚ್ಚಾರಣೆ

ಮಾಡುತ್ತಿದ್ದುದನ್ನು, ಪಾರಾಯಣ ಮಾಡುತ್ತಿದ್ದುದನ್ನು ನೀನು ಕೇಳಲಿಲ್ಲವೇ ? ಹೀಗಿದ್ದೂ ನೀನ್ಯಾಕೆ ಸುಳ್ಳು ಹೇಳಿದೆ" ಎಂದು ಜಬರಿಸಿಯೇ ಕೇಳಲಿಕ್ಕಾಗಿ ಗಿರಿಯಮ್ಮನು ವಿನೀತಳಾಗಿ "ಮಾವನವರೇ ನಾನು ನಿಮ್ಮನ್ನು ಪೂಜಾಗೃಹದಲ್ಲಿರುವುದನ್ನು ನೋಡಿದೆ ; ಆದರೆ ನಿಮ್ಮ ದಿಂಬವು ಮಾತ್ರ ಅಲ್ಲಿತ್ತೇ ಹೊರತಾಗಿ ಮನಸ್ಸು ಅಲ್ಲಿರಲಿಲ್ಲ........ಅದು ಹೊಲೆಯರ ಕೇರಿಯಲ್ಲಿ ಮೆಟ್ಟನ ವ್ಯವಹಾರದಲ್ಲಿ ತೊಡಗಿತ್ತು. ಆದುದರಿಂದ ನಾನು ಹಾಗೆ ಹೇಳಿದೆ....ಇದರಲ್ಲಿ ತಪ್ಪಿದ್ದರೆ ಕ್ಷಮಿಸಿ" ಎಂದೆನ್ನಲಿಕ್ಕಾಗಿ ಕರಣಿಕರು ಪೂಜಾಕಾಲದಲ್ಲಿ ತಮ್ಮ ಮನಸ್ಸಿನಲ್ಲಿದ್ದ ತುಚ್ಛ ವಿಚಾರವನ್ನು ಅಲ್ಲಗಳೆಯಲಾಗದೇ ಸೊಸೆಯಲ್ಲಿ ಕ್ಷಮೆಯನ್ನು ಯಾಚಿಸಿದ್ದಾರೆ. ಹೀಗೆ ದಿನದಿನಕ್ಕೆ ಗಿರಿಯಮ್ಮನ ನಿತ್ಯ ನಡವಳಿಕೆಗಳ ಸತ್ಯ ಸಂಗತಿಗಳೇ ಪವಾಡದ ಕಥೆಗಳಾಗಿ ಎಲ್ಲೆಡೆಗೂ ಹರಡ ತೊಡಗಿದೆಯಲ್ಲದೇ ಅವಳೊಬ್ಬ ಅಪರೋಕ್ಷಾನುಭವಿ ಎಂಬ ಸತ್ಯಾಂಶವೂ ಜನಜನಿತವಾಗಿ ಪ್ರಚುರವಾಗಿದೆ. ಹೀಗಿರಲು ಒಂದು ದಿನ ರಂಗನಾಥ ಸ್ವಾಮಿಯ ಅರ್ಚಕನು ತನ್ನ ನಿತ್ಯದ ಪೂಜೆಯನ್ನು ಪೂರಯಿಸಿ ಬಾಗಿಲಿಗೆ ಬೀಗಮುದ್ರೆಮಾಡಿ ಮನೆಗೆ ಬಂದವನು ಮರುದಿನ ಹೋಗಿ ನೋಡಿದರೆ ಹಾಕಿದ ಬಾಗಿಲಿನ ಬೀಗಮುದ್ರೆಯು ಹಾಗೇ ಇದ್ದರೂ ಸ್ವಾಮಿಯ ಕೈಯ ಬೆರಳಿನಲ್ಲಿಟ್ಟ ಉಂಗುರವು ಮಾತ್ರ ಇರಲಿಲ್ಲ ; ಉಳಿದೆಲ್ಲ ಅಲಂಕಾರಗಳೂ ಸರಿಯಾಗಿಯೇ ಇವೆ ; ಅರ್ಚಕನು ಹತ್ತೆಂಟು ಬಾರಿ ಗುಡಿಯಲ್ಲೆಲ್ಲ ಹುಡುಕಿದ ; ಆದರೂ ಉಂಗುರವು ಮಾತ್ರ ಸಿಕ್ಕಲಿಲ್ಲ. ಆಗ ನಿರಾಶನಾಗಿ ಭೀತಿಗೊಂಡ ಆತನು ಇನ್ನು ಈ ಕಳ್ಳತನದ ಆರೋಪವು ತನ್ನ ಮೇಲೆಯೇ ಬರುವುದೆಂಬ ಅಂಜಿಕೆಯಿಂದ ಹೆದರಿ ನಡೆದ ವಿಚಾರವನ್ನೆಲ್ಲ ಗಿರಿಯಮ್ಮನಲ್ಲಿ ಬಿನ್ನಯಿಸಿ ಪ್ರಾರ್ಥಿಸಲಿಕ್ಕಾಗಿ ಅವಳು ನಸುನಕ್ಕು ಹೀಗೆ ಹಾಡತೊಡಗಿದ್ದಾಳೆ—

ರಾಗ-ಶ್ರೀ　ತಾಲ-ಝಂಪೆ

ಹೊನ್ನು ತಾರೇ ಗುಬ್ಬಿ ಹೊನ್ನು ತಾರೇ ॥ ಪ ॥
ಚಿನುಮಯ ಮೂರುತಿ ಚೆಲುವ ರಂಗನಾ ।

ಘನ ಅಂಗುಲಿಯಾ ನೊಪ್ಪಿದ ಹೊನ್ನದು ॥ ಅ. ಪ ॥
ಹಸಿವ ಹಿಂಗಿಸುವ ಪ್ರಸಾದವಲ್ಲದು
ತೃಷೆಯಡಗಿಸುವಾ ತೀರ್ಥತಾನಲ್ಲಾ–
ಕುಸುಮನಾಭ ಶ್ರೀರಂಗನಾಥನಾ–
ಪ್ರಸಾದ ಕೊಡುವೆನು ತಾರವನುಂಗುರ ॥ ೧ ॥

ಚಿಂವ್ ಚಿಂವ್ ಎನ್ನುತೆ ಹಾರುವ ಹಕ್ಕಿಯೆ–
ಸವಿನೇವನೆ ನಾ ಕೊಡುವೆನು ಬಾರೋ–
ಅವನಿಗೊಡೆಯ ಶ್ರೀ ಪರಮೇಶದಾಸಳ–
ಸವಿನಯ ಪ್ರಾರ್ಥನೆ ನಡಿಸೊ ನೀ ಬಾರೋ ॥ ೨ ॥

ಎಂದು ತನ್ನ ಪದ್ಯವನ್ನು ಹಾಡಿ ಪ್ರಾರ್ಥಯಿಸುತ್ತಿರುವಂತೆಯೇ ಒಂದು ಗುಬ್ಬಚ್ಚಿಯು ಉಂಗುರವನ್ನು ತನ್ನ ಕೊಕ್ಕಿನಿಂದ ಎತ್ತಿತಂದು ಸ್ವಾಮಿಯ ಪಾದಮೂಲದಲ್ಲಿ ಎಸೆಯಿತು ; ಇದನ್ನು ಕಂಡು ಎಲ್ಲರಿಗೂ ಪರಮಾನಂದ ವಾಗಿದೆ. ಗಿರಿಯಮ್ಮನು ಗುಬ್ಬಿಗೆ ತಿನಿಸನ್ನಿತ್ತು ಸಂತೃಪ್ತಿಪಡಿಸಿದ್ದಾಳೆ. ಹೀಗೆ ಗಿರಿಯಮ್ಮನು ಹೆಳವನಕಟ್ಟೆ ರಂಗನಾಥನಲ್ಲಿ ಅಚಲವಾದ ಭಕ್ತಿಯ ನ್ನಿಟ್ಟು ಸೇವಾನಿರತಳಾಗಿರುತ್ತಿರುವಲ್ಲಿ ಅತ್ತ ಪುಂಗನೂರೆಂಬ ಒಂದು ಸಂಸ್ಥಾನದ ರಾಜನ ಮಗನಿಗೆ ಅಕಾರಣವಾಗಿ ಕಣ್ಣುಗಳೆರಡೂ ಕುರುಡಾಗಿ ಅಂಧತ್ವವು ಪ್ರಾಪ್ತವಾಗಲಾಗಿ ಆತನು ತನ್ನ ಯಾವ ರಾಜ ವೈದ್ಯರಿಂದಲೂ ಅದಕ್ಕೆ ಪರಿಹಾರವನ್ನು ಕಾಣದೇ ಕೊನೆಗೆ "ಸಂಕಟ ಬಂದಾಗ ವೆಂಕಟ ರಮಣಾ" ಎಂದೆಂಬ ನಾಣ್ನುಡಿಯಂತೆ ಭಯಭಕ್ತಿಯಿಂದ ತಿರುಪತಿಯ ತಿಮ್ಮಪ್ಪನಲ್ಲಿ ಮೊರೆಹೊಕ್ಕು ಆತನ ಸೇವೆಯನ್ನು ಮಾಡುತ್ತಿರಲಿಕ್ಕಾಗಿ ಒಂದು ದಿನ ರಾತ್ರೆ ಆತನ ಕನಸಿನಲ್ಲಿ ವೆಂಕಟಾಚಲಪತಿಯು ಕಾಣಿಸಿ ಕೊಂಡು–"ಅಯ್ಯಾ ನಿನ್ನ ಮಗನ ಒಂದು ಕಣ್ಣನ್ನು ನಾನು ಕರುಣಿಸಿದ್ದೇನೆ; ಇನ್ನೊಂದು ಕಣ್ಣಿಗಾಗಿ ನೀನು ಕೊಮಾರನಹಳ್ಳಿಗೆ ಹೋಗು ; ಅಲ್ಲಿ ನನ್ನ ಮಹಾ ಭಕ್ತೆಯಾದ ಸಂತ ಗಿರಿಯಮ್ಮನೆಂಬ ಸಾಧ್ವೀಮಣಿಯೊಬ್ಬಳಿ ದ್ದಾಳೆ ; ಅವಳು ತನ್ನ ಭೋಜನಕ್ಕಾಗಿ ಬಡಿಸಿದ ತುಪ್ಪವನ್ನೇ ಎತ್ತಿಟ್ಟು

ನನ್ನ ಮೂರ್ತಿಯ ಮುಂದೆ ದೀವಿಗೆಯನ್ನು ಉರಿಸಿ ಬೆಳಗಿಸುತ್ತಿದ್ದಾಳೆ; ಆ ಮಂಗಲ ಜ್ಯೋತಿಯ ಕಪ್ಪನ್ನು ನಿನ್ನ ಮಗನ ಕಣ್ಣಿಗೆ ಹಚ್ಚಿದರೆ ಆತನಿಗೆ ಇನ್ನೊಂದು ಕಣ್ಣೂ ಬರುತ್ತದೆ" ಎಂದೆನ್ನಲಿಕ್ಕಾಗಿ ನಿದ್ದೆ ತಿಳಿದೆದ್ದ ರಾಜನು ಮಗನ ಒಂದು ಕಣ್ಣು ಸ್ವಾಮಿಯ ಆದೇಶದಂತೆ ಕಾಣಲಿಕ್ಕಾಗಿ ಸಂತಸಗೊಂಡು ಆತನ ಸೇವೆಯನ್ನು ಮಾಡಿ ಮರುದಿನವೇ ಕೊಮಾರನಹಳ್ಳಿಗೆ ಹೊರಟು ಬಂದು ಗಿರಿಯಮ್ಮನನ್ನು ಕಾಣಿಸಿಕೊಂಡು ನಡೆದ ಸಕಲ ವೃತ್ತಾಂತವನ್ನೂ ತಿಳಿಹಿಸಿ ತನ್ನ ಪುತ್ರನಿಗೆ ನಯನದಾನ ಮಾಡಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಲಿಕ್ಕಾಗಿ ಗಿರಿಯಮ್ಮನು ವೆಂಕಟಗಿರಿವಾಸನ ಆಜ್ಞೆಯಂತೆ ಆ ಭಕ್ತಿ ದೀವಿಗೆಯ ಕಾಡಿಗೆಯನ್ನೇ ಆ ಕಂದನ ಕಣ್ಣಿಗೆ ಹಚ್ಚಿ ಹೀಗೆ ಹಾಡತೊಡಗಿದ್ದಾಳೆ—

ರಾಗ–ಫಡದೀಪ್. ತಾಲ–ಧೀಮು.

ಅರುಹ ಬಾರದೇ ನಿಮ್ಮ ಚರಿತೆಯನು ।
ನರಲೋಕಕೆ ನಗೆಗೀಡು ಮಾಡದ ಹಾಂಗೆ ॥ ಪ ॥
ಕಲ್ಲೊಳು ಕಾಂತೆಯ ಮಾಡಿದೆ ಎಂದು ।
ಹೇಳುತಲಿಹರು ಮೂಜಗದೊಳಗೇ । ಅಲ್ಲಿ ತೋರಿದ ಹಾಂಗೆ ।
ಇಲ್ಲಿ ತೋರಿಸಿದರೆ–ಬಲ್ಲಿದೆನ್ನೊಡೆಯ ।
ದೊಡ್ಡವನೆಂದು ಪೊಗಳುವೆ ನಾ ॥ ೧ ॥
ತ್ರಿಭಂಗಿಯಾಗಿದ್ದ ಕುಬ್ಜೆಯ ತನು ಎತ್ತಿ ।
ನವಯವ್ವನೆಯ ಮಾಡಿದೆಯೆಂಬರು ।
ಬಹು ಪರಾಕ್ರಮವನ್ನು ಈಗ ತೋರಿಸಿದರೆ ।
ಆಹದೋ ಎನ್ನೊಡೆಯ ದೊಡ್ಡವನೆಂದು ಸಾರುವೆ ನಾ ॥ ೨ ॥
ನೀನೇ ಗತಿ ಎಂದು ನಂಬಿದ ಭಕ್ತನ ಕಣ್ಣೊನವ ತಿದ್ದಿ ।
ನಿಜವ ತೋರಿಸಯ್ಯಾ । ದೀನದಯಾಳು ಹೆಳವನಕಟ್ಟೆ ರಂಗಯ್ಯ ।
ದಾನಿ ಎನ್ನೊಡೆಯ ದೊಡ್ಡವನೆಂದು ಹೇಳುವೆ ನಾ ॥ ೩ ॥

ಎಂದು ಪ್ರಾರ್ಥಿಸುತ್ತಿರಲಿಕ್ಕಾಗಿ ಶಿಶುವಿಗೆ ಅಂಧತ್ವವು ನೀಗಿ ಕಣ್ಣು ಕಾಣತ

ತೊಡಗಿದೆ. ಆಗ ಇದನ್ನು ಕಂಡ ರಾಜನು ಗಿರಿಯಮ್ಮನನ್ನು ಸ್ತುತಿಸಿ ಅವಳ ಸೂಚನೆಯಂತೆ ಸ್ವಾಮಿಗಾಗಿ ಪುಷ್ಕರಣಿಯಿಂದೊಡಗೂಡಿದ ಒಂದು ಭವ್ಯವಾದ ದೇವಸ್ಥಾನವನ್ನು ಮತ್ತು ಅದರ ಸುತ್ತ ಪ್ರಾಕಾರವನ್ನು ನಿರ್ಮಿಸಿದುದಲ್ಲದೇ ದೇವರ ನಿತ್ಯ ಪೂಜೋತ್ಸವಕ್ಕಾಗಿ ಭೂಮಿ ಕಾಣಿಕೆಗಳ ವ್ಯವಸ್ಥೆಯನ್ನೂ ಗೊಳಿಸಿ ಗಿರಿಯಮ್ಮನ ಅನುಜ್ಞೆಯನ್ನು ಪಡೆದು ಸಂತೃಪ್ತನಾಗಿ ಹೊರಟುಹೋಗಿದ್ದಾನೆ. ಹೀಗೆ ತಿರುಪತಿಯ ತಿಮ್ಮಪ್ಪನು ತನಗಿಂತಲೂ ತನ್ನ ಭಕ್ತರು ದೊಡ್ಡವರೆಂಬ ಮಹಾ ತತ್ವವನ್ನು ಸಾರಲಿಕ್ಕಾಗಿ, ಗಿರಿಯಮ್ಮನಿಂದ ರಾಜನ ಮಗನಿಗೆ ಕಣ್ಣನ್ನು ಕೊಡಿಸಿ, ತಾನು ಭಕ್ತಾಭಿಮಾನಿ ಎಂಬ ಬಿರುದನ್ನು ಹೊಗಳಿಸಿಕೊಂಡನು; ಆದುದರಿಂದಲೇ ಒಬ್ಬ ಭಕ್ತನು—

ರಾಗ–ಕೇದಾರ. ತ್ರಿತಾಳ.

ಉಸುರಲೀ ಹರಿಯೇ | ವಸುಧೆಗೆ ನಿಜವಾ ||
ಈಶದಾಸರಲಿ ದೊಡ್ಡವರ್ಯಾರೆಂದು || ಪ ||
ಶರಧಿಯ ಲಂಘಿಸಿ ಸೀತೆಯ ನರಸಿದ |
ಮಾರುತಿ ಲೋಕದೆ ದೊಡ್ಡವನೋಮಿಗೆ ||
ವಾರಿಧಿ ದಾಂಟಲು ಸೇತುವೆ ಬಯಸಿದ |
ಆ ರಾಮನುತಾ ದೊಡ್ಡವನೆಂಬುದ || ೧ ||
ಇಳೆಯ ನೆಲ್ಲವನು ದಾನವ ಮಾಡಿದ |
ಬಲಿತಾ ಲೋಕದೆ ದೊಡ್ಡವನೋಮಿಗೆ |
ಛಲದೊಳು ಭಕುತನ ತುಳಿದು |
ಮೆಟ್ಟಿದಾ ನಳಿನನಾಭನೋ ದೊಡ್ಡವನೆಂಬುದ || ೨ ||
ರಣದಲಿ ಚಕ್ರನ ಧರಿಸೆನೆಂದಹರಿ |
ಪಣವನು ಮುರಿಸಿದ ಭೀಷ್ಮನು ಮಿಗಿಲೇ |
ಕ್ಷೋಣಿಲಿ ಪಾಂಡವರನು ಸಲಹಿದ
ಚಿನುಮಯಮೂರ್ತಿ ಪರಮೇಶದಾಸರೊಳು ||

ಎಂಬುದಾಗಿ ಹಾಡಿದ್ದಾರೆ. ಇರಲಿ ಪ್ರಕೃತ ಇದಾದ ಮೇಲೊಂದು ದಿನ ಗಿರಿಯಮ್ಮನು ಸ್ವಾಮಿಯ ಮಂದಿರದಲ್ಲಿ ಕುಳಿತು ಸೇವೆಯನ್ನು ಸಲ್ಲಿಸುತ್ತಿರುವಾಗ ನೆರೆಯ ಹಳ್ಳಿಯಾದ ದಿಬ್ಬದ ಹಳ್ಳಿಯ ಪಟೇಲನಾದ ಹಾಲುಮತದ ರಂಗಪ್ಪನೆಂಬುವನು ತನ್ನ ಏಕಮಾತ್ರ ಪುತ್ರನ ಸತ್ತ ಮಗುವಿನ ಕಳೇಬರವನ್ನು ತಂದು ಅವಳ ಮುಂದಿರಿಸಿ "ತಾಯಿ ಇದು ನಿಮ್ಮ ಕರುಣ ಕಟಾಕ್ಷದಿಂದಲೇ ಹುಟ್ಟಿದ ನನ್ನ ಮಗುವು; ಆದರೆ ನನ್ನ ದುರ್ದೈವದಿಂದಾಗಿ ಇದೇ ಈಗ ಮರಣ ಹೊಂದಿತು; ನನಗಿನ್ನು ಬೇರೆ ಮಕ್ಕಳೂ ಇಲ್ಲ........ಹೀಗಾಗಿ ಇಂದಿಗೆ ನನ್ನ ಮನೆಯ ದೀಪದ ಕುಡಿಯು ಆರಿತು.... ತಾಯಿ....ರಕ್ಷಿಸಿ; ರಕ್ಷಿಸಿ—ಎಂದು ಪ್ರಾರ್ಥಿಸುತ್ತ ಗೋಳಿಡುತ್ತಿರಲಿಕ್ಕಾಗಿ ಗಿರಿಯಮ್ಮನು ಮರುಕಗೊಂಡು ಶ್ರೀ ರಂ ಗ ನಾ ಥ ನ ನ್ನು ಹೀಗೆ ಪ್ರಾರ್ಥಿಸತೊಡಗಿದ್ದಾಳೆ—

ರಾಗ–ಭೈರವ್. ತಾಲ–ಝಂಪ್.

ಪದುಮನಾಭನೆನಿಂನಾ–ಪಾದಕಿಂಕರನಂನ ।
ಕೈ ಬಿಡುವದುಚಿತವೇನೋ ರಂಗಾ ॥ ಪ ॥
ಮುದದಿಂದ ನಿನ್ನ ಪಾದಕ್ಕೆರಗುತಿಹೆ ನಾನು ।
ತ್ವರಿತದೀ ಸೀ ಕಾಯೋ ಎಂನೊಡೆಯಾ ರಂಗಾ ॥ ಅ. ಪ ॥
ಅಜಗರಶಯನನೆ । ಬುಧಜನರ ನಮಿತನೆ ।
ತ್ರಿಜಗವಂದಿತ ಪಾದ ಪದುಮಜನಕನೇ–ಎನ್ನ ॥ ೧ ॥
ಶಿಶುವಿನವತಾರದಿ । ಪಶುಗಳನು ಸಲಹಿದೆ ।
ಶಶಿಭೂಷಣನ ಸಖನೇ । ಶಿಶುವ ಕಾಪಾಡೋ ॥ ೨ ॥
ದ್ವಂದ್ವಚರಣಕ್ಕೊಂದು ವಂದಿಪೆನು ನಾನು ।
ತಂದೆ ಹೆಳವನಕಟ್ಟೆ ರಂಗಾ ಕೃಪಾಂಗ ॥ ೩ ॥

ಎಂತೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತಿರಲಿಕ್ಕಾಗಿ ನಿದ್ರೆ ಮಾಡಿದ ಕೂಸು ಎದ್ದು ರೋಧಿಸುವಂತೆ ಆ ಮಗುವು ಶುದ್ಧವಾಗಿ ಅಳತೊಡಗಿದೆ.

ನೆರೆದವರೆಲ್ಲರೂ ಈ ಪವಾಡವನ್ನು ಕಂಡು ಆಶ್ಚರ್ಯಭರಿತರಾಗಿ ಗಿರಿಯಮ್ಮನನ್ನು ಸ್ತುತಿಸಿದ್ದಾರೆ; ಆದರೆ ಅವಳು ಈ ಯಾವ ಸ್ತೋತ್ರ, ಪ್ರಾರ್ಥನೆಗಳಿಗೂ, ಹೊಗಳಿಕೆ ತೆಗಳಿಕೆಗಳಿಗೂ ಗಮನ ಕೊಡದೆ ಕೇವಲ ಪರಮಾತ್ಮನ ಪಾದಾರವಿಂದದಲ್ಲೇ ಭಕ್ತಿಯನ್ನಿಟ್ಟು—

ಶ್ಲೋಕ—

ನದೇವಲೋಕಂ ನಚಸಾರ್ವಭೌಮಂ–ನ ಪಾರಮೇಷ್ಠ್ಯಂ।
ನ_ರಸಾದಿಪತ್ಯಂ-ನಯೋಗ ಸಿದ್ಧಿಂ ನಪುನರ್ಭವಂ ವಾ।
ವಾಂಛಂತಿ-ಯತ್ಪಾದರಜಃ ಪ್ರಸನ್ನಾ ॥ ................ಎಂದೆನ್ನುವ ಭಕ್ತನ ತುರ್ಯಾವಸ್ಥೆಯಲ್ಲಿ ಯಾವ ಭೋಗಭಾಗ್ಯಾದಿ ಸಂಪತ್ತನ್ನೂ ಅಪೇಕ್ಷಿಸದೇ, ಯಾವ ಸಿದ್ಧಿಗೂ ಮನಸ್ಸುಕೊಡದೇ ಕೇವಲ ಪರಮಾತ್ಮನ ಸೇವೆಯಲ್ಲಿಯೇ ತೃಪ್ತಳಾಗಿ ತನ್ನ ಜೀವನವನ್ನು ಸಾಗಿಸುತ್ತಿದ್ದಳು. ಹೀಗಿರಲಿಕ್ಕಾಗಿ ಒಂದು ದಿನ ಮಧ್ವಮತ ಶಾಸ್ತ್ರಪಾರಂಗತರಾದ ಮಂತ್ರಾಲಯದ ಶ್ರೀ ಸು ಮ ತೀ ೦ ದ್ರ ಶ್ರೀ ಪಾದಂಗಳೆಂಬವರೊಬ್ಬರು ಸಂಚಾರಕ್ಕೆ ಹೊರಟವರು ಮಾರ್ಗತ್ಸೇನ ಕೊಮಾರನಹಳ್ಳಿಯ ಶ್ರೀ ರಂಗನಾಥಸ್ವಾಮಿಯ ದೇವಸ್ಥಾನಕ್ಕೆ ಬಂದು ಬೀಡುಬಿಟ್ಟರು. ಆಗ ಅಲ್ಲಿ ಪ್ರತಿದಿನವೂ ಅನೇಕ ವಿದ್ವಾಂಸರುಗಳೂ, ಪಂಡಿತೋತ್ತಮರೂ ಸೇರಿ ಶಾಸ್ತ್ರಾನುಸಂಧಾನವನ್ನು ನಡೆಯಿಸುತ್ತಿದ್ದರು. ಈ ಎಲ್ಲವನ್ನೂ ಲಕ್ಷ್ಯಪೂರ್ವಕವಾಗಿ ಕೇಳುತ್ತ ಅಲ್ಲೇ ಕುಳಿತಿರುವ ಗಿರಿಯಮ್ಮನನ್ನು ನೋಡಿ ಶ್ರೀಗಳವರು—ಅವಳಲ್ಲಿರುವ ಆಧ್ಯಾತ್ಮಿಕ ಶಕ್ತಿಯನ್ನು ಮನಗಂಡವರಾಗಿ ಪ್ರತಿ ದಿನವೂ ಪ್ರಸಾದ ವಿನಿಯೋಗವಾಗುವಾಗ ಆಕೆಗೇ ಮೊದಲು ಪ್ರಸಾದವನ್ನಿತ್ತು ಅನಂತರ ಉಳಿದವರಿಗೆ ಕೊಡುತ್ತಿದ್ದರು. ಇದು ಅಲ್ಲಿ ನೆರೆಯುತ್ತಿದ್ದ ಪಂಡಿತ ಸಮೂಹಕ್ಕೆ ಅವಮಾನವೆನ್ನಿಸಿತು. ಆಗ ಅವರು ಶ್ರೀಗಳೊಡನೆ " ಗಿರಿಯಮ್ಮಮ ಹೆಣ್ಣು ಹೆಂಗಸು ; ಇದರ ಮೇಲೆ ಮಕ್ಕಳಿಲ್ಲದ ವಂಧ್ಯೆ ; ಇಂತಹಳಿಗೆ ಮೊದಲು ಪ್ರಸಾದವೇ ಎಂದು ಆಕ್ಷೇಪಿಸಲಾಗಿ ಶ್ರೀಗಳವರು ಒಮ್ಮೆ ಸ್ವಲ್ಪ ಗೊಂದಲದಲ್ಲೇ ಬಿದ್ದರು. ಆಗ ಇದನ್ನರಿತ ಗಿರಿಯಮ್ಮನು

ನೇರವಾಗಿ ದೇವಸ್ಥಾನದ ಗರ್ಭಗುಡಿಯೊಳಕ್ಕೆ ಪ್ರವೇಶಿಸಿ ಶಿಶುರೂಪದಲ್ಲಿರುವ ಸ್ವಾಮಿಯನ್ನೇ ತನ್ನ ಕಂಕುಳಲ್ಲೆತ್ತಿಕೊಂಡು ಬಂದು " ನೋಡಿ ನನ್ನ ಕಂದಮ್ಮನನ್ನು " ಎಂದು ನುಗುವಿನೊಡನೆ ಮುದ್ದಾಡುತ್ತ ನಿಲ್ಲಲಿಕ್ಕಾಗಿ ಪಂಡಿತರುಗಳೆಲ್ಲರೂ ತಮ್ಮ ತಪ್ಪಿನ ಸಲುವಾಗಿ ಕ್ಷಮೆಯನ್ನು ಯಾಚಿಸಿದರು. ಶ್ರೀಗಳವರು ಗಿರಿಯಮ್ಮನನ್ನು ಕೊಂಡಾಡಿ ಹರಸಿದರು. ಪರಮಾತ್ಮನು ನಿರ್ಮಲ ಹೃದಯದ ಪರಿಶುದ್ಧವಾದ ಪ್ರೇಮಭಕ್ತಿಗಳನ್ನು ನೋಡುತ್ತಾನಲ್ಲದೇ ಪಾಂಡಿತ್ಯ, ವಿದ್ಯೆ, ಐಶ್ವರ್ಯ, ರೂಪುಗಳನ್ನಲ್ಲ—ಆದುದರಿಂದಲೇ ಜ್ಞಾನಿಗಳಾದವರು ಹೀಗೆ ಹೇಳಿದ್ದಾರೆ—

ಶ್ಲೋಕ—

> ಸುರೂಪಂ ಶರೀರಂ-ತಥಾವ ಕಳತ್ರಂ ।
> ಧನಂ ಮೇರುತುಲ್ಯಂ-ಯಶಃ ಚಾರುಚಿತ್ರಂ ।
> ಹರೇರಂಘ್ರಿಯುಗ್ಮೇ ಮನಶ್ಚೇನ ಲಗ್ನಂ ।
> ತತಃ ಕಿಂ-ತತಃ ಕಿಂ-ತತಃ ಕಿಂ-ತತಃ ಕಿಂ ॥

ಎಂದೆಂಬುನಂತೆ ಎಷ್ಟೇ ಧನಸಂಪತ್ತು, ರೂಪ, ಐಶ್ವರ್ಯ, ವಿದ್ಯೆ ಮೊದಲಾದುವುಗಳು ಇದ್ದರೂ ಯಾರ ಮನಸ್ಸು ಶ್ರೀ ಹರಿಯ ಪಾದಾರವಿಂದದಲ್ಲಿ ನೆಲೆಗೊಂಡಿರುವುದಿಲ್ಲವೋ ಅಂತಹವನ ಸರ್ವಸ್ವವೂ ನಿಷ್ಪ್ರಯೋಜನವು ಎಂಬುದಾಗಿ ಹೇಳಿದ್ದಾರೆ. ಇರಲಿ-ಪ್ರಕೃತ ಇನ್ನೊಂದು ದಿನ ಪೂಜಾ ಕಾಲದಲ್ಲಿ ಶ್ರೀಗಳವರು ಅಷ್ಟವಿದಾರ್ಚನೆ ಪೂಜೆಯಿಂದ ತಮ್ಮ ಇಷ್ಟ ದೇವತೆಯಾದ ರಾಮಚಂದ್ರ ಮೂರ್ತಿಯನ್ನು ಪೂಜಿಸುತ್ತ ಕೈಯಲ್ಲಿದ್ದ ತುಲಸೀಮಾಲೆಯನ್ನು ಆತನ ಕೊರಳಿಗೆ ತೊಡಿಸಬೇಕೆಂದು ತೊಡಗಿದರೆ ಪೀಠದಲ್ಲಿ ಪ್ರತಿಷ್ಠಿತವಾದ ಪ್ರತಿಮೆಯೇ ಇಲ್ಲ. ಶ್ರೀಗಳವರು ಅಪ್ರತಿಭರಾಗಿ ಹೀಗೇಕೆಂದು ಕತ್ತೆತ್ತಿ ನೋಡಿದರೆ ಶ್ರೀ ರಾಮಚಂದ್ರನು ಶಿಶುರೂಪದಿಂದ ಗಿರಿಯಮ್ಮನ ತೊಡೆಯಲ್ಲಿ ನಲಿದಾಡುತ್ತಿರುವಂತೆ ತೋರುತ್ತ ಮಾಯವಾದನು. ಆಗ ಅವರು ಆನಂದದಿಂದ ಭಕ್ತಿಪರವಶರಾಗಿ ಸ್ವಾಮಿಯನ್ನು ಇನ್ನೊಮ್ಮೆ ಕಾತುರತೆಯಿಂದ " ತಾಯಿ ಗಿರಿಯಮ್ಮಾ

ನೀನು ಮಹಾಭಕ್ತಿ ಸಂಪನ್ನೆ ; ನಿರ್ಮಲಾಂತಃಕರಣೆ; ಆ ನಿನ್ನ ಭಕ್ತ್ಯಾತಿಶಯದಿಂದಲೇ ಶ್ರೀ ರಾಮಚಂದ್ರನು ನಿನ್ನೊಡನೆ ಶಿಶುರೂಪದಿಂದ ಕ್ರೀಡೆ ಮಾಡುತ್ತಿದ್ದಾನೆ; ನಿನ್ನ ಸಂದರ್ಶನ ಸನ್ನಿವೇಶದಿಂದ ನನಗೂ ಒಮ್ಮೆ ಆತನ ದಿವ್ಯದರ್ಶನ ಲಾಭಉಂಟಾಯಿತ . ಆದರೆ ಆತನ ಆ ಮಂಗಲಮಯಮೂರ್ತಿಯನ್ನು ನೋಡಿ ತಣಿಯಬೇಕೆಂಬ ನನ್ನ ಹೃದಯದ ಹಸಿವು ಇನ್ನೂ ಹಿಂಗಲಿಲ್ಲ........ಆದುದರಿಂದ ಇನ್ನೊಮ್ಮೆ ಆ ಚಿನ್ಮಯಮೂರ್ತಿಯ ದರ್ಶನ ಭಾಗ್ಯವನ್ನು ನನಗುಂಟಾಗಿಸಮ್ಮಾ" ಎನ್ನಲಾಗಿ ಗಿರಿಯಮ್ಮನು ಶ್ರೀಗಳವರ ಪಾದಗಳಿಗೆರಗಿ ಪರಮಾತ್ಮನನ್ನು ಹೀಗೆ ಪ್ರಾರ್ಥಿಸತೊಡಗಿದ್ದಾಳೆ—

ರಾಗ–ಸಾರಂಗ. ತಾಲ–ದೀಪಚಂದಿ

ರಾಮಾ ಶ್ರೀ ರಘುನಂದನಾ ಶರಣು ಸಾರ್ವಭೌಮಾ.
ಭೂಸುರವಂದನಾ । ಸೋಮಶೇಖರ ಸ್ತೋತ್ರ ।
ಕಾಮಿತ ಫಲಧಾತೃ । ಕಾಮಧೇನು ವಿಶ್ವಾಭಿರಾಮನನ್ನತ-
ಸೀತಾರಾಮ ಶ್ರೀ ರಘುನಂದನಾ ॥ ಪ ॥
ಕ್ರೂರದಾನವ ಸಂಹಾರ । ಕೌಸಲ್ಯ ಕುಮಾರ.
ಭೂಭಾರಹಾರಾ ॥ ಭಕ್ತಜನೋದ್ಧಾರ ವೇದಾಂತಸಾರಾ ।
ಚಾರುವದನ ಮಣಿಹಾರಕುಂಡಲಧರ ।
ವೀರ ರಾಘವ ವಿಶ್ವಧಾರಕಮಣಿ ಸೀತಾರಾಮ..
ಶ್ರೀ ರಘುನಂದನಾ ॥ ೧ ॥
ಪಾಪರಹಿತ ಪಾವನಾ । ಚರಿತಕಲ್ಯಾ-
ಣಾಸುಖಂಡನ ಚರಣಾ । ಚಿನುಮಯ-
ದಿವ್ಯರೂಪಾ ರಮಾರಮಣಾ ॥ ತಾಪಾವಿಭೀಷಣಾ ।
ತಾಮಸಹರಣಾ ದಯಾ ಪರಬ್ರಹ್ಮಸ್ವರೂಪ ಮೂರುತಿ.
ಸೀತಾರಾಮ ಶ್ರೀ ರಘುನಂದನಾ ॥ ೨ ॥
ಮದನಕೋಟಿ ಮೋಹನಾಂಗ ಮಾಧವ ಪುಣ್ಯಚರಿತಾ-

ರಸಾಶುಭಾಂಗ । ಪ್ರೋಳಿವ ರತ್ನರಚಿತ ಕರುಣಾಕೃಪಾಂಗ ।
ಹೇಳವನಕಟ್ಟೆ ನೆಲೆಯಾದಿಯಾ ಶ್ರೀರಂಗಾ ।
ಸದನಂದ ಸುಮತೀಂದ್ರ ಹೃದಯ ಪಂಕಜ ಭೃಂಗ ।
ಕದನ ವಿಕ್ರಮ ಬಾಪೊ ಕೋದಂಡ-
ಧೃತ ಸೀತಾರಾಮ ಶ್ರೀರಘುನಂದನಾ ॥ ೩ ॥

—ಎಂದು ಭಕ್ತಿಯಿಂದ ಸ್ತೋತ್ರ ಮಾಡುತ್ತಿರಲಿಕ್ಕಾಗಿ ರಾಮಭದ್ರನು ಶಿಶು ರೂಪದಿಂದ ತಿರುಗೊಮ್ಮೆ ಗಿರಿಯಮ್ಮನ ಕಟಿಪ್ರದೇಶದಲ್ಲಿ ಕಂಗೊಳಿಸಿದನು. ಶ್ರೀಗಳವರು ಆನಂದಭರಿತರಾಗಿ ಸ್ವಾಮಿಗೆ ನಮಿಸುಣಿದು ಧನ್ಯೋಸ್ಮಿ ಎಂದರು. ಗಿರಿಯಮ್ಮನು ಸ್ವಾಮಿಯನ್ನು ಮುದ್ದಿಸಿ ಕಳುಹಿಸಿಕೊಡಲಾಗಿ ಆತನು ಪುನಃ ಪ್ರತಿಮಾರೂಪಿಯಾಗಿ ಆವಿರ್ಭವಿಸಿ ಶ್ರೀಗಳವರ ಪೂಜಾ ಪೀಠದಲ್ಲಿ ಪ್ರತಿಷ್ಠಿತನಾದನು. ಹೀಗೆ ಸಜ್ಜನರೀರ್ವರ ಸಂದರ್ಶನ ಸುಕೃತಿಗಳಿಂದ ಶ್ರೀ ರಾಮಚಂದ್ರಮೂರ್ತಿಯೇ ಶಿಶುರೂಪದಿಂದ ನೈವೇತ್ತು ಬಂದು ದರ್ಶನವಿಸ್ತಿತ್ತನು. ಆದುದರಿಂದಲೇ ಜ್ಞಾನಿಗಳು ಏನು ಹೇಳಿದ್ದಾರೇ ಅಂತಂದ್ರೆ—

ರಾಗ-ಶಂಕರ್

ಸಜ್ಜನ ಕೋ ಸಜ್ಜನ ಮಿಲೇತೋ ಚಂದನ ಮೇ ಕರ್ಪೂರ ।
ದುರ್ಜನ ಕೋ ದುರ್ಜನ ಮಿಲೇತೋ ಭಾಂಗ್ ಮೇ ದತ್ತೂರ್ ॥
ಸಾಧು ಕೋ ಸಾಧು ಮಿಲೇತೋ ಕರೇದೋದೋ ಬಾತ್ ।
ಗದ್ಧೇಕೋ ಗದ್ಧೇ ಮಿಲೇತೋ ಮಾರೇ ದೋದೋ ಲಾತ್ ॥

—ಎಂದರೆ ಸಜ್ಜನರ ಜತೆಯಲ್ಲಿ ಸಜ್ಜನರು ಸೇರಿದರೆ ಶ್ರೀಗಂಧದ ಜತೆಯಲ್ಲಿ ಪಚ್ಚ ಕರ್ಪೂರವು ಸೇರಿದಂತಾಗುತ್ತದಂತೆ; ಅದೇ ದುರ್ಜನರ ಜತೆಯಲ್ಲಿ ದುರ್ಜನರು ಸೇರಿದರೆ ಭಂಗಿಯ ಜತೆಗೆ ದತ್ತೂರಿಯ ಬೀಜವನ್ನು ಸೇರಿಸಿ ದಂತಾಗುತ್ತದಂತೆ; ಹಾಗೆಯೇ ಸಾಧುವಿನ ಜತೆಯಲ್ಲಿ ಸಾಧುವು ಸೇರಿದ್ದೂ ಜ್ಞಾನಸಂಬಂಧವಾದ ನಾಲ್ಕು ಮಾತುಗಳು ನಡೆಯುತ್ತವಂತೆ; ಅದೇ ಕತ್ತೆಯ ಜತೆಗೆ ಕತ್ತೆ ಸೇರಿದರೆ ಹಿಂಗಾಲಿನ ಒದೆತಕ್ಕೆ ಪ್ರಾರಂಭ

ವಾಗುತ್ತದಂತೆ ; ಇದನ್ನೇ ಇನ್ನೊಬ್ಬ ಕವಿಯು ಹೀಗೆ ವರ್ಣಿಸಿದ್ದಾನೆ—

ವಚನ—

ರಾಗ–ಬಹಾರ್. ತಾಲ-ಝಂಪ್.

ತೋಟಗೆಳೆತನಕಿಂತ-ಹೂವಾಡಿಗನ ಕೂಡೆ
ಜಗಳ ಕಾಯುವುದೆ ಲೇಸು ಲೇಸು ಲೇಸು–
ಕೋಟಿ ಹೇಳುವ ಆತ್ಮ ಶುದ್ಧಿರದ ಗುರುಗಿಂತ
ಕಟ್ಟೆ ಕೊರಳಿಗೆ ಕಲ್ಲ ಮಡುವ ಧುಮುಕ್ವುದೆ ಲೇಸು–
ಬೂಟಾಟಿಕೆಯ ಭಾವಜೈರಾಪಿ ಕೃಪೆಗಿಂತ
ಮೆಟ್ಟಾಗಿ ಪರಮೇಶದಾಸನಡಿ ಲೇಸು........

—ಎಂಬಂತೆ ಕಕ್ಕಸ ಬಳಿಯುವವನ ಸ್ನೇಹಕ್ಕಿಂತ ಮಲ್ಲೆ, ಮಲ್ಲಿಗೆ, ಜಾಜಿ, ಸಂಪಿಗೆ, ಕೇದಿಗೆ ಮೊದಲಾದ ಸುಗಂಧ ಪುಷ್ಪಗಳ ವ್ಯಾಪಾರಿಯೊಡನೆ ಗುದ್ದಾಡಿದರೂ ಸುಖವಂತೆ–ಯಾಕೆಂದರೆ ಈರ್ವರಲ್ಲಿ ಯಾರ ಪರಿಮಳ ಅಗತ್ಯ ಯೋಚಿಸಿರಿ....ಇರಲಿ ಪ್ರಕೃತ ಶ್ರೀ ಪಾದಂಗಳವರು ಸ್ವಾಮಿಯ ಸಂದರ್ಶನದಿಂದ ಆನಂದಭರಿತರಾಗಿ ಗಿರಿಯಮ್ಮನನ್ನು ಮನಸಾರೆ ಹೊಗಳಿ ಆಶೀರ್ವದಿಸಿ ಮುಂದಕ್ಕೆ ಪ್ರಯಾಣ ಬೆಳೆಯಿಸಿದ್ದಾರೆ. ಇದಾದ ಮೇಲೊಂದು ದಿನ ಗಿರಿಯಮ್ಮನು ಹಿತ್ತಲಲ್ಲಿ ಸೆಗಣಿಯನ್ನು ಗುಡ್ಡೆಹಾಕಿ ಬೆರಣಿಯನ್ನು ತಟ್ಟಬೇಕೆಂದು ಅಣಿಗೊಳಿಸುತ್ತಿದ್ದಾಳೆ. ಆಗ ಬೀದಿಯಲ್ಲಿ ತಿರುಪತಿಯ ಯಾತ್ರೆಗೆ ಹೊರಟ ಯಾತ್ರಿಕರ ಗುಂಪೊಂದು ಭಜನೆಯನ್ನು ಮಾಡುತ್ತಸಾಗಿದೆ ; ಗಿರಿಯಮ್ಮನು ಅದನ್ನು ನೋಡಿದೊಡನೆಯೇ ತಾನು ಆ ಗುಂಪಿನಲ್ಲಿ ಸೇರಿ ಭಜನೆಯನ್ನು ಮಾಡುತ್ತ ಮುಂದಕ್ಕೆ ನಡೆದು ಬಿಟ್ಟಳು. ಇತ್ತ ರಂಗನಾಥನು ಮನೆಯಲ್ಲಿ ಅತ್ತೆಮಾವಂದಿರ ಹಾಗೂ ಹಿರಿಯರ ಅನುಜ್ಞೆಯನ್ನು ಪಡೆಯದೇ ಭಕ್ತಿಯ ಆವೇಶದಲ್ಲಿ ಯಾತ್ರಿಕರ ಸಮೂಹ ದಲ್ಲಿ ಬೆರೆತು ಹೊರಟು ಹೋದುದರಿಂದ–ತನ್ನ ಭಕ್ತಳಾದ ಗಿರಿಯಮ್ಮನಿಗೆ ಅಪವಾದವು ಬರುವುದೆಂದು, ತಾನು ಅವಳು ಮಾಡದೇಬಿಟ್ಟ ಕುಳ್ಳು ತಟ್ಟುವ ಕೆಲಸವನ್ನು ಅವಳ ರೂಪದಿಂದಲೇ ಮುಂದುವರಿಸಿದುದಲ್ಲದೆ

ಮನೆಯಲ್ಲಿ ಅವಳು ಮಾಡಬೇಕಾಗಿದ್ದ ಕೆಲಸವನ್ನು ಕೂಡ ಯಾರಿಗೂ ಸಂಶಯ ಬಾರದ ರೀತಿಯಲ್ಲಿ ಮಾಡತೊಡಗಿದನು ; ಅದೆಷ್ಟು ಕರುಣೆಯೋ ಪಾಪ ಆ ಪರಮಾತ್ಮನಿಗೆ ತನ್ನ ಭಕ್ತರ ಮೇಲೆ ! ಇದನ್ನು ಆತನೇ ಹೀಗೆ ಹೇಳಿದ್ದಾನೆ—

ಶ್ಲೋಕ—

ರಾಗ–ದುರ್ಗಾ.

ಅಹಂ ಭಕ್ತಪರಾಧೀನಃ ಅಸ್ವತಂತ್ರ ಇವದ್ವಿಜಃ ॥

—ಎಂದರೆ ತಾನುಭಕ್ತರ ಇಚ್ಛೆಗಧೀನನಲ್ಲದೇ ಸ್ವತಂತ್ರನಲ್ಲಾ ಎಂಬುದಾಗಿ ಅಲ್ಲದೆ ಹಿಂದೆ ಎಷ್ಟೋ ಬಾರಿ ದುಷ್ಟ ಶಿಕ್ಷಣ, ಶಿಷ್ಟಪರಿಪಾಲನೆಗಾಗಿ ತಾನು ಹೆಣ್ಣಾಗಿ ಮೆರೆದು ನೀಚದಾನವರನ್ನು ಮಣ್ಣುಮಾಡಿದ ಆ ಸ್ವಾಮಿಗೆ ಈಗ ಹೆಣ್ಣಾಗುವುದರಲ್ಲಿ ವೈಶಿಷ್ಟ್ಯವಾದರೂ ಏನು ? ಆದುದರಿಂದಲೇ ಪುರಂದರದಾಸರು ನಾರಾಯಣನ ನಾರೀ ರೂಪವನ್ನು ಹೀಗೆ ವರ್ಣಿಸಿದ್ದಾರೆ-

ರಾಗ–ಬಿಲಹರಿ. ತಾಲ–ಮಿಶ್ರಛಾಪು

ಇಂಥಾ ಹೆಣ್ಣಿನ ನಾನೆಲ್ಲೂ ಕಾಣೆನೋ । ಹೊಂತಕಾರಿ ಕಾಣೆನೋ ।<br>
ಸಂತತ ಸುಧೆಯನು ಅಸುರರಿಗೀಯದೇ ।<br>
ಪಂಕ್ತಿಯೊಳಗೆ ಪರಪಂಕ್ತಿಯ ಮಾಡಿದ ॥ ಪ ॥<br>
ಮಂದರಗಿರಿತಂದು । ಸಿಂಧುವಿನೊಳಗಿಟ್ಟು ।<br>
ಚಂದದಿ ಕಡೆದು ಅಮೃತವ ತೆಗೆದು ॥<br>
ಚಂದಿರ ಮುಖಿಯೆನೀ ಬಡಿಸೆಂದು ಕೊಟ್ಟರೆ ।<br>
ದೊಂದುಗೆಳನೆ ಮಾಡಿ ಖಳರ ವಂಚಿಸಿದಂಥ ॥ ೧ ॥<br>
ವಿಶ್ವಾಸದಿಂದಲಿ । ಅಸುರಗೆ ವರವಿತ್ತ ।<br>
ತ್ರಿಶೂಲಧರನು ಓಡಿ ಬಳಲುತಿರೇ ॥<br>
ನಸುನಗುತಲಿ ಬಂದು । ಭಸ್ಮಾಸುರನಿಗೆ ।<br>
ಭೋಗದಾಶೆಯ ತೋರಿ । ಭಸ್ಮಮಾಡಿದಂಥ ॥ ೨ ॥

ವಸುಧೆಯೊಳಗೆ ಯಾರ | ವಶವಾಗದ ಹೆಣ್ಣು |
ಬಸುರಲಿ ಬ್ರಹ್ಮನ ಪಡೆದಿಹಳು ||
ಕುಸುಮನಾಭ ಶ್ರೀ ಪುರಂದರವಿಠ್ಠಲನೆಂ |
ದ್ದೆಸರು ಪೊತ್ತಿಹ ಈ ಹೊಸಕನ್ನಿಕೆಯುಳು || ೩ ||

-ದಾಸರು ನಾರಾಯಣಿಯನ್ನು ಹೊಸಕನ್ನಿಕೆಯುಳು ಎಂದು ಸಂಭೋದಿಸಿ ದ್ದಾರೆ: ನಾರಾಯಣ ನಾರದರ ಗರ್ವಭಂಗಕ್ಕಾಗಿ ತಾನೇ ನಾರಿಯಾಗಿ ಸಂಪನ ಮಕ್ಕಳನ್ನೇ ಹಡೆದಿದ್ದಾನೆ; ವಿಶ್ವದ ಜೀವಕೋಟಿಯನ್ನೆಲ್ಲ ತನ್ನ ಬಸಿರಿನಲ್ಲಿ ಹೊತ್ತು, ಹೆತ್ತು, ಕಾಪಾಡಿ ವಿಶ್ವಕುಟುಂಬಿ ವಿಶ್ವಮಾತಾ ಎಂದೆ ನಿಸಿದ್ದಾನೆ; ಆದರೂ ದಾಸರ ದೃಷ್ಟಿಯಿಂದ ಅವಳು ಹೊಸಕನ್ನಿಕೆಯಂತೆ. ಇಂದಿನ ಪ್ರಪಂಚದಲ್ಲಿ ಒಂದೆರಡು ಮಕ್ಕಳಾದೊಡನೆಯೇ ಅಥವಾ ಅದಕ್ಕೂ ಮುಂಚಿತವಾಗಿಯೇ ಕೈಬಿಸ್ಕಟ್, ಕಾಲುಸೋತು, ಸೊಂಟಮುರಿದು ಜೀವ ಶ್ರವನಂತೆ ತಿರುಗುತ್ತಿರುವ ಮುಂದಿನ ಆಧುನಿಕ ಭಾರತದ ವೀರಸ್ತ್ರೀಯರನ್ನು ಯೋಚಿಸಿಯೇ ಅವರು ಹಾಗೆ ಸಂಭೋದಿಸಿದ್ದಾರೋ ಏನೋ.... ಇರಲಿ— ಇತ್ತ ತಿರುಪತಿಯ ಯಾತ್ರೆಯಿಂದ ಮರಳಿದ ಗಿರಿಯಮ್ಮನಿಗೆ ತಾನು ಹಿರಿ ಯರ ಅಪ್ಪಣೆಯನ್ನು ಪಡೆಯದೇ ಯಾತ್ರೆಗೆ ಹೊರಟುಹೋದುದು ತಪ್ಪೆಂದೆನಿಸಿ ಅತ್ತೆ ಮಾವಂದಿರಲ್ಲಿ ಕ್ಷಮಾಯಾಚನೆಯನ್ನು ಮಾಡಲಾಗಿ ಅವರೆಲ್ಲರಿಗೂ ಪರಮಾಶ್ಚರ್ಯ ಉಂಟಾಗಿದೆ. ಅವರು "ಇದೇನಮ್ಮಾ ನೀನು ಹೀಗೆ ಹೇಳುತ್ತಿರುವೆಯಲ್ಲಾ! ನೀನು ಇಲ್ಲೇ ಇದ್ದಿದ್ದೆಯಲ್ಲಾ! ನಿತ್ಯವೂ ಮನೆಕೆಲಸವನ್ನು ಮಾಡುತ್ತಿದ್ದೆಯಲ್ಲಾ! ಹಟ್ಟಿಕೊಟ್ಟಿಗೆಯ ಕೆಲಸ, ಬೆರಣಿ ತಟ್ಟುವ ಕೆಲಸ! ಇವ್ಯಾವುದನ್ನು ಬಿಟ್ಟೇ ಇರಲಿಲ್ಲವಲ್ಲಾ! ಅದೋ ನೋಡು ನೀನು ತಟ್ಟಿಟ್ಟ ಕುಳ್ಳಿನ ರಾಶಿ ಅಲ್ಲೇ ಇದೆ ಎಂದು ತೋರಿಸಲು-ಎಲ್ಲರೂ ಅದನ್ನು ಪರಿಶೀಲಿಸಿ ನೋಡಲಿಕ್ಕಾಗಿ ಸ್ವಾಮಿಯು ತಟ್ಟಿದ ಕುಳ್ಳಿನ ಮೇಲೆಲ್ಲ ಆತನ ಕೈಗಳ ಶುಭರೇಖೆಯು ಕಾಣಿಸಲು ಎಲ್ಲರ ಸಂದೇಹವೂ ಪರಿಹಾರವಾಗಿದೆ. ಗಿರಿಯಮ್ಮನು ಆ ಸ್ವಾಮಿಯು ತನಗಾಗಿ ಮಾಡಿದ ದಾಸ್ಯವೃತ್ತಿಯನ್ನು ನೆನೆನೆನೆ ದ

ಕಣ್ಣೀರಿಡುತ್ತ ಆ ಮಹಾಪುರುಷನ ಹಸ್ತಸ್ಪರ್ಶದಿಂದ ಪವಿತ್ರವಾದ ಆ ಬೆರಣಿಯನ್ನೆತ್ತಿ ಮುದ್ದಿಡುತ್ತ ಹೀಗೆ ಹಾಡತೊಡಗಿದ್ದಾಳೆ.

ಸೀಸಪದ್ಯ—

ರಾಗ–ಆನಂದಭೈರವಿ

ಘನಮಹಿಮ ನೀನಯ್ಯ ಶ್ರೀರಂಗನಾಥನೇ ।
ಏನು ಅಭಿಮಾನವೋ ಭಕ್ತರಲಿ ನಿನಗೇ ॥
ಎನಗಾಗಿ ಓ ಸ್ವಾಮಿ ಎಂಥ ಸೇವೆಯ ಗೈದೆ ।
ಈ ನಿನ್ನ ತೊತ್ತಿನಾ ಶೀಲ ಉಳಿಸಲಿಕೆ ॥ ೧ ॥
ಆಳಾಗಿ ದುಡಿದೆನ್ನ ಕೆಲಸವನು ಗೈದೆಯಾ ।
ಹೇಳು ಹೇಳಯ್ಯ ನೀ ಎನಿತೊಂದು ದಣಿವೆ ।
ಕೇಳ ಬಲೆ ನೀ ನರನ ಕುದುರೆ ಬೆನ್ನುಜ್ಜಿದನು ।
ಸಲೆ ನಿನ್ನ ವಾತ್ಸಲ್ಯ ಕಣ್ಣಾರೆ ಕಂಡೆ ॥ ೨ ॥
ಕಡು ಪಾಪಿ ನಾನಯ್ಯ ಒಡೆಯ ನೀ ಓ ಸ್ವಾಮಿ ।
ಕಡುಬಡವೆ ನಾನಹುದು ಸಿರಿಯರಸ ನೀನು ॥
ನುಡಿಯು ನಿಂತಿವೆ ಎನಗೆ ನಿನ್ನ ಪೊಗಳಲು ದೇವ ।
ಒಡೆಯ ಶ್ರೀ ಪರಮೇಶದಾಸಳನು ಹರಸೋ ॥ ೩ ॥

ಎಂಬುದಾಗಿ ಪರಮಾತ್ಮನನ್ನು ನೆನೆನೆನೆದು ಚಿಂತಿಸುತ್ತಿರಲಿಕ್ಕಾಗಿ ಎಲ್ಲರೂ ಅವಳನ್ನು ಸಂತೈಸಿ ಕೊಂಡಾಡಿದ್ದಾರೆ. ಹೀಗೆ ಗಿರಿಯಮ್ಮನ ಕೀರ್ತಿಯು ದಿನದಿನಕ್ಕೂ ವ್ಯಾಪ್ತವಾಗುತ್ತಿರಲಿಕ್ಕಾಗಿ ನೂರಾರು ಜನ ಭಾವುಕರು ಅವಳ ದರ್ಶನಕ್ಕಾಗಿಯೇ ಕೊಮಾರನಹಳ್ಳಿಗೆ ಬರುತ್ತಿದ್ದರು. ಒಮ್ಮೊಮ್ಮೆ ಗಿರಿಯಮ್ಮನು ಈ ಭಕ್ತಜನರೊಡಗೂಡಿ ಪುಣ್ಯಕ್ಷೇತ್ರಗಳಿಗೆ ಯಾತ್ರೆ ಹೊರಡುತ್ತಿದ್ದಳು. ಹೀಗೆ ಹೊರಟ ಯಾತ್ರಿಕರ ತಂಡವು ಒಮ್ಮೆ ಮೈಲಾರಕ್ಕೆ ಹೋಗಲಾಗಿ ಅಲ್ಲಿ ಗಿರಿಯಮ್ಮನು ಭಕ್ತಿಯಿಂದ ಮೈಲಾರ ಲಿಂಗವನ್ನು ಪೂಜಿಸಿ ಸ್ತುತಿಮಾಡತೊಡಗಿದ್ದಾಳೆ. ಆಗ ಜತೆಯಲ್ಲಿದ್ದ ಕೆಲವು ಮಂದಿ ಅಪಕ್ವಿಗಳಾದ ಭಕ್ತರು ಗಿರಿಯಮ್ಮನನ್ನು ಕುರಿತು—

“ ತಾಯಿ—ವಿಷ್ಣುಭಕ್ತರಾದ ನೀವು ಈಶ್ವರನನ್ನು ಆರಾಧಿಸುವುದು ಉಚಿತವೇ ಎಂದು ಆಕ್ಷೇಪವನ್ನು ಎತ್ತಲಿಕ್ಕಾಗಿ ಅವಳು ಈ ಭಕ್ತರ ಮೌಢ್ಯತೆಯನ್ನು ಕಂಡು ನಸುನಕ್ಕು— “ ಅಪ್ಪಾ ಎಲ್ಲ ಕಡೆಗಿರುವ ಆ ಚೈತನ್ಯ ಶಕ್ತಿಯು ಒಂದೇ-ಏಕಂ ಸದ್ವಿಪ್ರಾಃ ಬಹುಧಾವದಂತಿ ” ಎಂದೆನ್ನುವಂತೆ ಮೂಲಕಹ ಒಂದೇ ಆದ ಆ ಮಹಾಶಕ್ತಿಯನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಹೆಸರಿಸಿ ಕರೆದಿರುವವರಲ್ಲದೇ ಇವರಲ್ಲಿ ಯಾವ ಭೇದವೂ ಇಲ್ಲ— ಇನ್ನೂ ಹೇಳುತ್ತೇನೆ ಕೇಳಿ—

ರಾಗ–ಖಂಬಾವತಿ. ತಾಲ–ಜನದ್ಏಕ್ಕಾ.

ಈತ ಲಿಂಗದೇವಾ ಶಿವನೂ । ಆತ ರಂಗಧಾಮ ವಿಷ್ಣು ।
ಮಾತನಾಡೋ ಮಂಕು ಮನುಜ । ಮನದ ಅಹಂಕಾರಬಿಟ್ಟು ॥ಪ॥
ಮಾಧವನಗೊಲಿದಾತ ನೀತ । ಮಾಧವ ಮಧುಸೂದನಾತಾ ॥
ಮದನಸುರುಹಿದಾತನೀತ । ಮದನನ ಪಡೆದಾತನಾದ ॥ ೧ ॥
ವೇದಕ್ಕೆ ಶಿಲ್ಕದಾತನೀತ । ವೇದ ನಾಲ್ಕನು ತಂದನಾತ ॥
ಬೂದಿ ಮೈಯೊಳ್ ಹೋಯ್ದಾನೀತ ।
ಪೋದಗಿರಿಯ ಪೊತ್ತನಾತ ॥ ೨ ॥
ಗಂಗೆಯ ಪೊತ್ತಾತನೀತ । ಗರುಡ ಗಮನನಾದನಾತಾ ।
ತುಂಗ ಹೆಳವನಕಟ್ಟೆವಾಸ । ರಂಗನಾತ ಲಿಂಗನೀತ ॥ ೩ ॥

-ಎಂತೆಂದು ಸತ್ಯ ತತ್ವವನ್ನು ನಿರೂಪಿಸಲಿಕ್ಕಾಗಿ ಎಲ್ಲರೂ ಅದನ್ನು ಮಾನಿಸಿಸುಮ್ಮನಾದರು. ಹೀಗೆ ಗಿರಿಯಮ್ಮನು ತನ್ನ ತೀರ್ಥಯಾತ್ರೆಗಳ ಸಂಚಾರದ ಕಾಲದಲ್ಲಿ ಅನೇಕಾನೇಕ ತೀರ್ಥಕ್ಷೇತ್ರಗಳನ್ನು ಸಂಚರಿಸಿ ಅಲ್ಲಲ್ಲಿ ಪ್ರತಿಷ್ಠಿತವಾದ ದೇವ ದೇವರುಗಳನ್ನು ಸ್ತುತಿಸಿ ಎಲ್ಲೆಲ್ಲಿಯೂ ಆ ಒಬ್ಬನನ್ನೇ ಕಂಡು-ಆ ಒಬ್ಬನಲ್ಲೆ ಸರ್ವವನ್ನೂ ನೋಡಿ ಅಖಂಡತ್ವವನ್ನು ಸಾಧಿಸಿದ ಅನುಭಾವಿಯಾದಳು. ಹೀಗಿರಲು ಒಮ್ಮೆ ಆ ಪ್ರಾಂತದಲ್ಲಿ ಭೀಕರವಾದ ಬರಗಾಲವು ಪ್ರಾಪ್ತವಾಯಿತು ; ಮಳೆ ಇಲ್ಲದೇ ಕೆರೆ ಬಾವಿಗಳೆಲ್ಲಾ ಬತ್ತಿ ನಿರ್ಜಲವಾದವು. ಸಕಲ ಜೀವ ಜಂತುಗಳೂ ತೃಷೆಯಿಂದ ಬಳಲಿ, ಬಾಡಿ,

ಬೆಂಡಾವವು; ಎಲ್ಲೆಲ್ಲಿಯೂ ಹಾಹಾಕಾರ! ಭೀಕರ ಕ್ಷಾಮ. ಇಂತಹ ವಿಪತ್ಕಾರಕ ಪರಿಸ್ಥಿತಿಯಲ್ಲಿ ಲೋಕವೇ ಕಂಗೆಟ್ಟು ಭಯಭೀತವಾಗಿ ಗಿರಿಯಮ್ಮನ ಮೊರೆಹೊಕ್ಕು ಮಳೆಯನ್ನು ಬರಿಸುವಂತೆ ಪ್ರಾರ್ಥಿಸಿದ್ದಾರೆ. ಆಗ ಗಿರಿಯಮ್ಮನು ಪರಮಾತ್ಮನನ್ನು ಹೀಗೆ ಪ್ರಾರ್ಥಿಸತೊಡಗಿದ್ದಾಳೆ—

ರಾಗ-ಬಾಗೇಶ್ರೀ. ತಾಳ-ಝಂಪ್.

ಮಳೆಯ ದಯಮಾಡೋ ಶ್ರೀ ರಂಗಾ ಶ್ರೀ ರಂಗಾ |
ಕರುಣೆ ತಪ್ಪಿದರೆ ಉಳಿಯದೀ ಲೋಕ || ಪ ||
ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಎಲ್ಲ.
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದೂ |
ತೃಷೆಯುಡಗದೆ ಮೂರ್ಛೆಗೊಂಡು ತಲ್ಲಣಿಸುತಿವೆ-
ದೆಶೆದೆಶೆಗೆ ಬಾಯ್ಬಿಡುತಲಿರುವವು ಹರಿಯೆ || ೧ ||
ಸಂದುಹೋದವು ಜ್ಯೇಷ್ಠ ಆಷಾಡ ಶ್ರಾವಣ |
ಬಂದಿವೆ ಭಾದ್ರಪದ ಮಾಸ ಮಳೆಗಾಲವು ||
ಇಂದು ಪುರಂದರಗ್ಹೇಳಿ ವೃಷ್ಟಿಯನು ತರಿಸೋ |
ಸಂದೇಹವ್ಯಾಕೆ ಹೆಳವನಕಟ್ಟೆ ರಂಗಯ್ಯ || ೨ ||

—ಎಂತೆಂದು ಭಕ್ತಿಯಿಂದ ಹಾಡುತ್ತ ಮೈಮರೆತು ಧ್ಯಾನಾಸಕ್ತಳಾಗಿ ಕುಳಿತಿರ ಲಿಕ್ಕಾಗಿ ನಿರ್ಮಲವಾದ ಆಕಾಶದಲ್ಲಿ ಒಮ್ಮಿಂದೊಮ್ಮೆಗೇ ಕಾರ್ಮೋಡಗಳು ಕಾಣಿಸಿಕೊಂಡು ಗುಡುಗು ಮಿಂಚಿನಿಂದ ಕೂಡಿದ ಜಡಿಮಳೆಯು ಪ್ರಾರಂಭ ವಾಗಿದೆ. ಬತ್ತಿದ ನದಿಗಳು ಕೆರೆ ಬಾವಿಗಳು ತುಂಬಿ ಎಲ್ಲೆಲ್ಲಿಯೂ ಸಂತಸದ ಸುಗ್ಗಿಯು ಹರಿದಿದೆ. ಹೀಗೆ ಗಿರಿಯಮ್ಮನು ತನ್ನ ಭಕ್ತಿಯ ಬಲದಿಂದ ಮಹಾಶಕ್ತಿ ಸಂಪನ್ನೆಯಾಗಿ ಲೋಕರುಗಳ ಎದೆಯ ನೆಚ್ಚಾಗಿ, ಭಕ್ತ ಕೋಟಿಯ ಹೃದಯದ ಮೆಚ್ಚಾಗಿ ಜೀವನ ಸಾಫಲ್ಯಗೊಳಿಸಿಕೊಂಡಿರುವಾಗ ಅವಳ ಪತಿಯಾದ ತಿಪ್ಪರಸನು ಮರಣವನ್ನು ಹೊಂದಿದ್ದಾನೆ ಆಗ ಆಕೆಯು ಭಗವಂತನ ಪ್ರೇರಣೆಯಂತೆ ತನ್ನ ಇಹಲೋಕದ ಧಾರ್ಮಿಕ ಸಾಧನೆಯು ಇಲ್ಲಿಗೆ ಮುಗಿದುದರಿಂದ ಇನ್ನು ತನ್ನ ಲೌಕಿಕ ಸಂಬಂಧವಾದ ಜಡ ಶರೀರ

ವನ್ನು ತ್ಯಜಿಸಿ ಶಾಶ್ವತವಾದ ಪರಮಾತ್ಮನ ಸಾನ್ನಿಧ್ಯವನ್ನು ಸೇರಬೇಕೆಂದು ಇಚ್ಛಿಸಿ ಕೊನಸಾರನಹಳ್ಳಿಗೆ ಆರು ಮೈಲಿಯ ದೂರದಲ್ಲಿರುವ ತುಂಗಭದ್ರಾ ನದಿಯ ಸಂಗಮವಾದ ಕರ್ಮಹರ ಕ್ಷೇತ್ರವೆಂಬಲ್ಲಿಗೆ ಹೊರಡಲು ನಿಶ್ಚಯಿಸಿದಳು. ಇದನ್ನು ತಿಳಿದ ಭಕ್ತ ಜನಸ್ತೋಮವು ಗಿರಿಯಮ್ಮನ ಈ ಜೀವಂತ ಜಲಸಮಾಧಿಯನ್ನು ಒಪ್ಪದೇ ಅದನ್ನು ತಪ್ಪಿಸಲು ಬಹು ವಿಧವಾಗಿ ಹಂಗಲಾಚಿ ಬೇಡಿತು; ಅತ್ತಿತ್ತು; ಚೀರಿತು; ಗೋಳಿಟ್ಟಿತು. ಆದರೂ ಅವ್ಯಾವೂವೂ ಗಿರಿಯಮ್ಮನ ಹೃದಯದ ನಿರ್ಧಾರವನ್ನು ಬದಲಿಸಲು ಸಾಧ್ಯವಾಗಲಿಲ್ಲ. ಅವಳು ತನ್ನ ಮುಂದಿನ ಶಾಶ್ವತವಾದ ಅಂತಿಮ ಯಾತ್ರೆಗಾಗಿ ಹೊರಡಲು ಅಣಿಯಾದಳು. ಗಿರಿಯಮ್ಮನು ಮೊದಲು ತನ್ನ ಉಪಾಸನಾ ದೇವತೆಯಾದ ಶ್ರೀ ರಂಗನಾಥನ ಸಾನ್ನಿಧ್ಯಕ್ಕೆ ಹೋಗಿ ಭಕ್ತಿಯಿಂದ ಆತನನ್ನು ಅರ್ಚಿಸಿ ಹೀಗೆ ಸ್ತುತಿಸತೊಡಗಿದ್ದಾಳೆ—

ರಾಗ-ಮಿಶ್ರಪೀಲು. ತಾಲ-ಖವಾಲಿ

ಸಾಕುಮಾಡೊ ಜನ್ಮ ರಂಗಯ್ಯಾ ॥
ಲೋಕಕಿನ್ನು ಬಾರದಂತೇ ॥ ಪ ॥
ಏಕನಿಷ್ಠೆಯಿಂದ ಬೇಡ್ವೆ । ನೂಕಬೇಡ ದೇವನೀ ॥ ಅ ಪ ॥
ಭಕ್ತಾ ಕುಟುಂಬಿಯೇ-ಮುಕ್ತಿದಾತನೇ ಸ್ವಾಮಿ ॥
ಸಾಕೀ ಜಂಜಾಟದೇವಾ । ಬೇಕೋ ನಿತ್ಯಶಾಂತಿಯು ॥
ಏಕನಿಷ್ಠೆಯಿಂದ ಬೇಡ್ವೇ । ನೂಕಬೇಡ ದೇವನೀ .... । ೧ ॥
ಅನಾದಿ ಅನಂತನೀ । ಚಿನುಮಯಮೂರ್ತೀ ನಾರಾಯಣ ।
ನಾನಾ ಲೀಲಾನಾಟ್ಯಧಾರಿ । ನೀನೆ ಪರಮೋದಾಸ ಬಂಧು ।
ಏಕನಿಷ್ಠೆಯಿಂದ ಬೇಡ್ವೆ । ನೂಕಬೇಡ ದೇವನೀ ॥ ೨ ॥

—ಎಂದು ಭಕ್ತಿಯಿಂದ ಮಣಿದು ಆತನ ಶ್ರೀ ಚರಣಗಳನ್ನು ಮನದಣಿಯುವಂತೆ ಕಂಡು ತಣಿದು, ಸ್ವಾಮಿಯ ಪುಣ್ಯನಾಮವನ್ನು ನಾಲಿಗೆಯಿಂದ ನೆನೆನೆನೆದು ಅಲ್ಲಿಂದ ಹೊರಟಿದ್ದಾಳೆ. ಮನೆಮನೆಯಲ್ಲೂ ಬೀದಿಬೀದಿಯಲ್ಲೂ ಮುತ್ತೈದೆಯರು ಅವಳ ಉಡಿಯನ್ನು ತುಂಬಿ, ಮಂಗಲದ್ರವ್ಯ

ಗಳನ್ನಿತ್ತು ಪೂಜಿಸಿ ನಮಸ್ಕರಿಸಿ ಮುಂದಕ್ಕೆ ಬೀಳ್ಕೊಟ್ಟಿದ್ದಾರೆ. ಹೆಣ್ಣು ಗಂಡಾದಿಯಾಗಿ ಪ್ರಚಂಡ ಜನಸ್ತೋಮವು ಗಿರಿಯಮ್ಮನನ್ನು ಹಿಂಬಾಲಿಸಿ ಪರಮಾತ್ಮನ ನಾಮಸ್ಮರಣೆಯನ್ನು ಮಾಡುತ್ತ ನಡೆದಿದೆ ಗಿರಿಯಮ್ಮನಾದರೋ ಸಾಗರವನ್ನು ಸೇರಲು ಹೊರಟ ಗಗನವಾಹಿನಿಯಾದ ಗಂಗೆಯಂತೆ ಉನ್ಮತ್ತಳಾಗಿ ಹೀಗೆ ನಾಮಸ್ಮರಣೆ ಮಾಡುತ್ತಾ ಮುಂದೆ ಸಾಗಿದ್ದಾಳೆ. ಶ್ರೀ ರಂಗಾ ಜೈ! ಶ್ರೀ ರಂಗಾ ಜೈ !! ಶ್ರೀ ರಂಗಾ ಜೈ !! ಶ್ರೀ ರಂಗಾ ಜೈ!!! ಎಂದೆಂಬ ದಿವ್ಯಸ್ತೋತ್ರವು ಎಲ್ಲರ ಬಾಯಿಂದಲೂ ಭಕ್ತಿಯಿಂದ ಉಕ್ಕಿ ಹರಿಯುತ್ತಿರಲಿಕ್ಕಾಗಿ ಎಲ್ಲರೂ ತುಂಗಭದ್ರಾನದಿಯ ಸಂಗಮವಾದ ಕರ್ಮಹರ ಘಟ್ಟವನ್ನು ಸೇರಿದ್ದಾರೆ. ಅಲ್ಲಿ ಗಿರಿಯಮ್ಮನು ನದಿಯನ್ನು ಪೂಜಿಸಿ ತನ್ನನ್ನು ಹಿಂಬಾಲಿಸಿ ಬಂದ ಸಕಲರನ್ನೂ ಆಶೀರ್ವದಿಸಿ, ಪರಮಾತ್ಮನಲ್ಲಿ ಅಖಂಡವಾದ ಭಕ್ತಿಯನ್ನು ನೆಲೆ ನಿಲ್ಲಿಸ ಪಂತೆ ಎಲ್ಲರಿಗೂ ಉಪದೇಶಿಸಿ ನದಿಯಲ್ಲಿ ಇಳಿದು—ಶ್ರೀ ರಂಗಾ ಜೈ ! ಶ್ರೀ ರಂಗಾ ಜೈ ! ಎಂದೆನ್ನುತ್ತ ಮುಂದ ಮುಂದಕ್ಕೆ ಸಾಗಿ ದಡದಲ್ಲಿಯ ಭಕ್ತಕೋಟಿಯು ಭಕ್ತಿಯ ಆವೇಶದಲ್ಲಿ, ಪ್ರೇಮದ ಉಕ್ಕಿನಲ್ಲಿ ಶ್ರೀ ರಂಗಾ ಜೈ ! ಶ್ರೀ ರಂಗಾಜೈ ! ಎಂತೆಂದು ಸ್ತೋತ್ರಮಾಡುತ್ತಿರಲು ನದಿಯ ತಳದಲ್ಲಿ ಇಳಿ ಇಳಿದು ಜಾರಿ ಜಲಸಮಾಧಿಯನ್ನೈದಿದ್ದಾಳೆ. ಹೀಗೆ ಬಿಂದುವು ಸಿಂಧುವನ್ನು ಸೇರಿ ಒಂದಾದಂತೆ ಗಿರಿಯಮ್ಮನು ಪರಮಾತ್ಮನಲ್ಲಿ ಕಲೆತು, ಬೆರೆತು ಏಕರಸವಾದಳು........ಎಂಬಲ್ಲಿಗೆ ಸಂತ ಗಿರಿಯಮ್ಮನ ಸತ್ಕಥೆಯು ಮುಗಿದಿದೆ. ಆದುದರಿಂದಲೇ ಕೀರ್ತನ ಪ್ರಾರಂಭದಲ್ಲಿ ಜ್ಞಾನಿಗಳಾದವರು ತಮ್ಮ ತಮ್ಮ ಇಷ್ಟದೇವತೆಯ ಶ್ರೇಷ್ಠತೆಯಲ್ಲಿ ಒಡಿದಾಡುತ್ತಿರುವ ಅಜ್ಞಾನಿಗಳನ್ನು ಕಂಡು ಕನಿಕರದಿಂದ ಏನು ಹೇಳಿದ್ದಾರೇ ಅಂತಂದ್ರೆ—

ಶ್ಲೋಕ—

ಯಂಶೈವಾ ಸಮುಪಾಸತೇ ಶಿವಯಿತಿ–ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧಯಿತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।

ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ ।
ಸೋಯಂನೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ॥

## — ಮಂಗಲ —

ಮಂಗಳಂ ಜಯ ಮಂಗಳಂ ॥ ಪ ॥
ಚಲಿಸುವ ಜಲದಲ್ಲಿ ಮತ್ಸ್ಯನಿಗೇ ।
ಗಿರಿಯ ಬೆನ್ನಲಿ ಪೊತ್ತ ಕೂರ್ಮನಿಗೇ ।
ಧರೆಯನುದ್ಧರಿಸಿದ ವರಹವತಾರಗೆ ।
ತರಳನ್ನ ಕಾಯ್ದ ಶ್ರೀ ನರಸಿಂಹಗೇ ॥ ೧ ॥
ಭೂಮಿಯ ದಾನವ ಬೇಡಿದಗೇ ।
ಆ ಮಹ ಕ್ಷತ್ರಿಯರ ಗೆಲಿದವಗೇ ।
ರಾಮಚಂದ್ರ ದಶರಥ ಸುತನಿಗೆ ಸತ್ಯ ।
ಭಾಮೆಯರರಸ ಗೋಪಾಲಕೃಷ್ಣಗೇ ॥ ೨ ॥
ಬತ್ತಲೆ ನಿಂತಿದ್ದ ಬೌದ್ಧನಿಗೆ ।
ಉತ್ತಮ ಹಯವೇರಿದ ಕಲ್ಕಿಗೆ ॥
ಹತ್ತವತಾರದಿ ಭಕ್ತರ ಸಲಹುವ ।
ಕರ್ತೃ ಶ್ರೀ ಪುರಂದರ ವಿಠ್ಠಲಗೇ ॥ ೩ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ ।
ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿಯದ್ಯತ್ಸಕಲಂ ಪರಸ್ಮೈ ।
ನಾರಾಯಣಾಯೇತಿ ಸಮರ್ಪಯಾಮಿ ॥

**ವಿಠ್ಠಲ ಜೈ ಜೈ ! ವಿಠ್ಠಲ ಜೈ ಜೈ !!**
**ಜೈ ಜೈ ವಿಠ್ಠಲ ! ಜೈ ಜೈ ವಿಠ್ಠಲ !!**
**ವಿಠ್ಠಲ–ವಿಠ್ಠಲ–ವಿಠ್ಠಲ–ವಿಠ್ಠಲ........**

ಜೈ ಜೈ ಶ್ರೀಮದ್ರಮಾರಮಣ ಗೋವಿಂದ ಗೋಪಿಂದ ।
ಜೈ ಜೈ ನಮಃ ಪಾರ್ವತೀಪತೇ ಹರಹರ ಮಹಾದೇವ ।
ಶ್ರೀ ಸದ್ಗುರು ಮಹರಾಜಕೀ ಜೈ ।
ಸಬ್ ಸಾಧುಸಂತ ಮಹನೀಯೋಂಕೀ ಜೈ ।
ಜೈ । ಜೈ। ರಘುವೀರ ಸಮರ್ಥ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಹರಿಃ ಓಂ........ಶಿವ ಓಂ........ಗುರು ಓಂ........

# ಅನಾಥಸೇವಾಶ್ರಮ, ಮಲ್ಲಾಡಿಹಳ್ಳಿ

ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲಾ.

## ಸೂಕ್ಷ್ಮ ಪರಿಚಯ

ಪ್ರಿಯ ಬಂಧುಗಳೇ.

—೦೦—

ಇದೊಂದು ಸಾರ್ವಜನಿಕ ಸೇವಾಕೇಂದ್ರ. ಜನಸೇವೆಯೇ ಜನಾರ್ಧನ ಸೇವೆ-ಯೆಂದು ಟೊಂಕಕಟ್ಟಿ ನಿಂತಿರುವ ಸಂಸ್ಥೆ. ಜಾತಿ-ಮತಗಳ ಭೇದಭಾವವಿಲ್ಲದೆ ಕೇವಲ ಮಾನವನ ಹಿತದೃಷ್ಟಿಯಿಂದ ಈ ಸಂಸ್ಥೆಯು ಎಂದೆಂದೂ ದುಡಿದಿದೆ-ದುಡಿಯುತ್ತಿದೆ ಆರ್ಯಸಂಸ್ಕೃತಿಯ ಮೂಲ ತಳಹದಿಯ ಮೇಲೆ ಲೌಕಿಕ-ಪಾರಮಾರ್ಥಿಕಗಳೆರಡರ ಸಮ್ಮಿಲನವನ್ನೂ ಸಾಧಿಸಿ ಮಾನವನ ಜೀವನವನ್ನು ಕೃತಾರ್ಥವನ್ನಾಗಿಸುವ ಸದುದ್ದೇಶದಿಂದಲೇ ಈ ಸಂಸ್ಥೆಯು ಪ್ರಾರಂಭಿಸಲ್ಪಟ್ಟಿದೆ. ಇಲ್ಲಿ ದೈಹಿಕ, ಮಾನಸಿಕ, ನೈತಿಕ ಮತ್ತು ಆಧ್ಯಾತ್ಮಿಕ ಪ್ರಗತಿಗೆ ಅವಶ್ಯಕವಾದ ಶಿಕ್ಷಣಗಳನ್ನು ಕೊಡಲಾಗುತ್ತದೆ. ಮಲ್ಲಾಡಿಹಳ್ಳಿಯು ಈ ಸೇವಾಶ್ರಮದ ಕೇಂದ್ರವಾದರೂ, ವಿಶಾಲ ವಿಶ್ವವೇ ಇವರ ಕಾರ್ಯರಂಗ. ವಿಶ್ವಭ್ರಾತೃತ್ವ, ವಿಶ್ವಪ್ರೇಮ ಮತ್ತು ವಿಶ್ವಸೇವೆಯೇ ಇವರ ಅಂತರಾಳದ ಹೆಬ್ಬಯಕೆ.

---

### ಈವರೆಗೆ ಆಗಿರುವ ಕಾರ್ಯಗಳು

೧. ಆಯುರ್ವೇದ ಚಿಕಿತ್ಸಾಲಯ
೨. ರುಗ್ಣಾಲಯ
೩. ವಿದ್ಯಾರ್ಥಿ ವಸತಿಗೃಹ
೪ ರಾಷ್ಟ್ರೀಯ ವಿವಿಧೋದ್ದೇಶ ಪ್ರೌಢಶಾಲೆ
೫. ಸರ್ವಸೇವಾ ಬೋಧಕ ಶಿಕ್ಷಣಾಲಯ
೬. ವೃತ್ತಿ ಶಿಕ್ಷಣ ಶಾಲೆ
೭ ವಾಚನಾಲಯ ಮತ್ತು ಪುಸ್ತಕಭಂಡಾರ
೮. ಸಾಹಿತ್ಯಮಾಲೆ ೯. ವ್ಯಾಯಾಮಶಾಲೆ
೧೦. ಆಧ್ಯಾತ್ಮಿಕ ಶಿಕ್ಷಣಾಂಗ
೧೧. ಸಹಕಾರ ಸಂಘ ೧೨. ಧರ್ಮಶಾಲೆ
೧೩. ಅಂಚೆಮನೆ ೧೪. ಗೋಶಾಲೆ
೧೫. ಉಪಾಧ್ಯಾಯರ ವಸತಿಗೃಹ
೧೬. ಮಕ್ಕಳರಾಜ್ಯ
೧೭. ಈ ಎಲ್ಲಕ್ಕೂ ನೀರು ಬೆಳಕು

### ಇನ್ನೂ ಆಗಬೇಕಾದ ಕಾರ್ಯಗಳು

೧. ವೃತ್ತಿ ಶಿಕ್ಷಣ ಶಾಲೆ
೨. ಆಯುರ್ವೇದ ಶಿಕ್ಷಣಾಲಯ
೩. ಮಹಿಳಾ ಸೇವಾ ಸಮಾಜ
೪. ಅನಾಥ ಶಿಶುಪೋಷಣಾಲಯ
೫. ವ್ಯವಸಾಯ ಶಿಕ್ಷಣಾಲಯ
೬. ಕಲಾವಿಭಾಗ
೭. ಪತ್ರಿಕಾ ಪ್ರಕಟಣೆ
೮. ವಿದ್ಯಾರ್ಥಿಗಳ ವಸತಿಗೃಹ
೯. ಅಧ್ಯಾಪಕರು ಮತ್ತು ಸಿಬ್ಬಂದಿಯ ವಸತಿ
೧೦. ಶಿಶುವಿಹಾರ—ಮಹಿಳಾಸಮಾಜ

---

ವಿ. ಸೂ.—ಆಶ್ರಮದ ಸೇವೆಗಾಗಿ ಸರ್ವರ ಉದಾರ ನೆರವನ್ನು ಕೋರಲಾಗಿದೆ.

—ವ್ಯವಸ್ಥಾಪಕ.

## ಬೇಕಾಗಿದ್ದಾರೆ ! ಸೇವಾಮನೋಭಾವವುಳ್ಳ ಉತ್ಸಾಹೀ ವಿದ್ಯಾವಂತ ತರುಣ ತರುಣಿಯರಲ್ಲಿ ವಿನಂತಿ

ಭವ್ಯಭಾರತದ ನಿರ್ಮಾಣ ಕಾರ್ಯದ ಸೇವೆಯ ಗುರಿಯಲ್ಲಿ ದಿನದಿನಕ್ಕೆ ವಿಸ್ತೃತವಾಗಿ ಬೆಳೆಯುತ್ತಿರುವ ಆಶ್ರಮದ ಹಲವು ಸೇವಾಕ್ಷೇತ್ರದ ಕಾರ್ಯದಲ್ಲಿ ಭಾಗಿಗಳಾಗಿ ಉಚಿತ ಸೇವೆಯನ್ನು ಸಲ್ಲಿಸಲು ಸಿದ್ಧರಾಗಿರುವ (ಶಿಲ್ಪಿಗಳು, ಚಿತ್ರಗಾರರು, ಸಂಗೀತ ನಾಟ್ಯ ಕಲಾವಿದರು, ವೃತ್ತಿಶಿಕ್ಷಕರು, ಕೆಲಸಗಾರರು) ಆಧ್ಯಾತ್ಮಿಕ ಮನೋಭಾವವುಳ್ಳ ಆರೋಗ್ಯ ದೃಢಕಾಯರಾದ ವಿದ್ಯಾವಂತ ಸ್ತ್ರೀ–ಪುರುಷರು ಬೇಕಾಗಿದ್ದಾರೆ. ನಮ್ಮೀ ಸೇವಾಯಜ್ಞದಲ್ಲಿ ಭಾಗಿಯಾಗಲಿಚ್ಛಿಸುವ ಉತ್ಸಾಹಿಗಳು ತಮ್ಮ ವಯಸ್ಸು, ವಿದ್ಯೆ, ರಚನಾತ್ಮಕ ಸೇವಾಕಾರ್ಯದಲ್ಲಿ ತಮಗಿರುವ ಅನುಭವಗಳನ್ನೊಳಗೊಂಡ ವಿವರವಾದ ನಿವೇದನಾಪತ್ರವನ್ನು ಸಲ್ಲಿಸಬೇಕಾಗಿ ಕೋರಿದೆ. ಸೇರುವ ಕಾರ್ಯಕರ್ತರಿಗೆ ಆಶ್ರಮದಲ್ಲಿ ಉಚಿತ ಊಟ–ವಸತಿಯ ಸೌಕರ್ಯವನ್ನು ಮಾತ್ರ ಏರ್ಪಡಿಸಿ ಕೊಡಲಾಗುವುದಲ್ಲದೆ ಬೇರೆ ಯಾವ ಪ್ರತಿಫಲವನ್ನೂ ಕೊಡಲಾಗುವುದಿಲ್ಲ. ಸಂಸಾರದ ಪೋಷಣೆಯ ಹೊಣೆಗಾರಿಕೆ ಇರುವ ಸೇವಾಕರ್ತರಿಗಿಲ್ಲಿ ಅವಕಾಶವಿಲ್ಲ. ಉತ್ತರಕ್ಕಾಗಿ ಅರ್ಜಿಗಳೊಡನೆ ಅಂಚೆಚೀಟಿಯನ್ನು ಕಳುಹಿಸಬೇಕಾಗಿ ಕೋರಿದೆ.

ಸಂಚಾಲಕ, ಅನಾಥಸೇವಾಶ್ರಮ, ಮಲ್ಲಾಡಿಹಳ್ಳಿ.

---

## ಸರ್ವೋದಯ ಮುದ್ರಣಾಲಯ

ಅನಾಥಸೇವಾಶ್ರಮ, ಮಲ್ಲಾಡಿಹಳ್ಳಿ.

ನಮ್ಮಲ್ಲಿ ಕನ್ನಡ, ಇಂಗ್ಲಿಷ್,
ಹಿಂದೀ ಭಾಷೆಗಳಲ್ಲಿ

- ಅಂದವಾಗಿ ಮುದ್ರಣ ಕೆಲಸಗಳನ್ನೂ,
- ಉತ್ತಮ ತರಹೆಯ ಬೈಂಡಿಂಗ್
- ಕೆಲಸಗಳನ್ನೂ ಸುಲಭ
- ದರದಲ್ಲಿ ಮಾಡಿಕೊಡುತ್ತೇವೆ.

ಒಂದು ಸಾರಿ ಪರೀಕ್ಷಿಸಿರಿ. —ವ್ಯವಸ್ಥಾಪಕ.

ನಮ್ಮ ಆಶ್ರಮದ ಹೆಸರಿನಲ್ಲಿ ಭಿಕ್ಷೆಮಾಡಿ ಜೀವಿಸುತ್ತಿದ್ದ ಹೊಸದುರ್ಗ ತಾಲ್ಲೂಕಿನ ಹೊನ್ನೆಕೆರೆಹಳ್ಳಿ ಕಟ್ಟೆರಂಗಪ್ಪ ಎಂಬುವನು ಹೋದವರ್ಷ ಸಿಕ್ಕಿಬಿದ್ದು ಪೋಲಿಸರ ವಶನಾದಂತೆ. ಈ ವರ್ಷವೂ ದಕ್ಷಿಣ ಕನ್ನಡ ಜಿಲ್ಲೆಯ ಬಾಬಿ ಎಂಬ ಹೆಸರಿನ ಠಕ್ಕನೊಬ್ಬನು ಆಶ್ರಮದ ಸಂಸ್ಥಾಪಕರ ತಮ್ಮನೆಂದು ಹೇಳಿಕೊಳ್ಳುತ್ತಾ ಭಿಕ್ಷೆ ಮಾಡುತ್ತಿದ್ದು ಬಿಳಿಚೋಡು ಗ್ರಾಮಸ್ಥರ ಮತ್ತು ಪೋಲಿಸರ ಸಾಹಸದ ಪರಿಣಾಮವಾಗಿ ಸಿಕ್ಕುಬಿದ್ದು, ಚಿತ್ರದುರ್ಗದ ಪೋಲೀಸರ ವಶನಾಗಿರುತ್ತಾನೆ. ಇನ್ನೂ ಇವರಂತೆ ಕೆಲಮಂದಿ ಸ್ವಾರ್ಥಿಗಳು ಆಶ್ರಮದ ಹೆಸರನ್ನು ಬಳಸಿಕೊಂಡು ತೆರೆಮರೆಯಲ್ಲಿದ್ದಾರೆಂಬುದು ನಮಗೆ ಖಚಿತವಾಗಿ ತಿಳಿದಿದೆ; ಅವರೆಲ್ಲರೂ ಆದಷ್ಟು ಬೇಗ ಸಿಕ್ಕುಬಿದ್ದು ಜನತೆಯ ಮುಂದೆ ಕಣ್ಣೀರು ಹಾಕುವ ಕಾಲವು ದೂರವಿಲ್ಲವೆಂಬುದನ್ನು ಅರಿಯಲಿ. ನಮ್ಮ ಆಶ್ರಮದಿಂದ ಪೂಜ್ಯ ಸಂಸ್ಥಾಪಕರು ಮತ್ತು ಕಾರ್ಯವರ್ಶಿಗಳಾದ ಸೂರುದಾಸ್‌ಜೀಯವರು ಮಾತ್ರ ಭಿಕ್ಷೆಗೆ ತಮ್ಮಲ್ಲಿಗೆ ಬರುತ್ತಾರಲ್ಲದೇ ಮತ್ಯಾರೂ ಇದಕ್ಕೆ ನಿಯೋಜಿತರಾಗಿಲ್ಲ. ಒಂದು ವೇಳೆ ಬೇರಾರಾದರೂ ತಮ್ಮಲ್ಲಿಗೆ ಆಶ್ರಮದ ಹೆಸರಿನಲ್ಲಿ ಬಂದರೆ ಕೂಡಲೇ ಹಿಡಿದು ಅವರನ್ನು ಪೋಲೀಸರ ವಶಪಡಿಸಬೇಕೆಂದು ಜನತೆಯನ್ನು ಪ್ರಾರ್ಥಿಸುತ್ತೇವೆ.

ಇತಿ ನಮ್ರ ಬಂಧು,

**ಆಶ್ರಮದ ಸಂಸ್ಥಾಪಕರು,**

ಅನಾಥಸೇವಾಶ್ರಮ, ಮಲ್ಲಾಡಿಹಳ್ಳಿ.

ಸ್ಥಳೀಯ ಸಂಸ್ಥೆಗಳ ಕಮೀಷನ್‌ರವರ ಕಮ್ಯುನಿಕೇಷನ್ ನಂ. E. 7 C. 1753/52-53 13-4-53; R.D.R. 7-1507/52-53-13-12-53 ಮತ್ತು R.D.R. 7-76 50-51 3-8-50 ಗಳ ಮೇರೆಗೆ ನಮ್ಮ ಪುಸ್ತಕಗಳು ಗ್ರಾಮ ಪಂಚಾಯಿತಿಗಳಿಗೂ ಮತ್ತು ವಿದ್ಯಾ ಇಲಾಖೆಯ ಡೈರೆಕ್ಟರ್‌ರವರ T.B.C. 9 49-50—8-8-50 ಮತ್ತು D. 67 51-52—9-2-52 ಗಳ ಅಪ್ಪಣೆ ಮೇರೆ ವಿದ್ಯಾಸಂಸ್ಥೆಗಳ ಲೈಬ್ರರಿಗಳಿಗೂ ಮಂಜೂರಾಗಿದೆ. ಈ ಪುಸ್ತಕಗಳ ಮಾರಾಟದಿಂದ ಬರುವ ಹಣವು ಜನ ಸೇವೆಯ ಈ ಪವಿತ್ರ ಕಾರ್ಯಕ್ಕಾಗಿಯೇ ಉಪಯೋಗಿಸಲ್ಪಡುವುದರಿಂದ ಗ್ರಾಮ ಪಂಚಾಯಿತಿಗಳೂ, ವಿದ್ಯಾಸಂಸ್ಥೆಗಳೂ ತಮ್ಮ ಸಂಪೂರ್ಣ ನೆರವು ನೀಡಬೇಕೆಂದು ಕೋರಲಾಗಿದೆ.

—**ಪ್ರಕಾಶಕರು.**

# ದಾನಿಗಳಿಗೆ ತೆರಿಗೆ ವಿನಾಯಿತಿ

ಘನಸರಕಾರದವರು ನಮ್ಮೀ ಆಶ್ರಮದ ಸೇವಾಕಾರ್ಯವನ್ನು ಕಂಡು ಸಂತುಷ್ಟರಾಗಿ ದಾನಿಗಳಿಗೆ ಅನುಕೂಲವಾಗಿ ನಮ್ಮ ಸೇವಾಕಾರ್ಯದಲ್ಲಿ ನೆರವಾಗುವಂತೆ ತಮ್ಮ C. No. 718/1/57 ರ ಆರ್ಡರಿನ ಮೂಲಕವಾಗಿ ಒಂದು ಅಭಯಹಸ್ತವನ್ನು ನೀಡಿರುತ್ತಾರೆ. ಆ ಕೇಳಿಕೆಯಂತೆ ಎರಡುನೂರ ಐವತ್ತು ರೂಪ್ಯಾಗಳಿಂದ ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳವರೆಗೆ ಆಶ್ರಮಕ್ಕೆ ಸಹಾಯಮಾಡುವ ದಾನಿಗಳ ದಾನದ ಮೌಲ್ಯದ ಮೇಲೆ ತೆರಿಗೆಯ ವಿನಾಯಿತಿಯನ್ನು ನೀಡಲಾಗುತ್ತದೆ. ಆ ಆರ್ಡರಿನ ಪೂರ್ಣಪಾಠ ಹೀಗಿದೆ;

C. No. 718/1/57.

Office of the Commissioner of Income Tax,
IN MYSORE, BANGALORE–1

Dated 11 th October, 1957.

To The Secretary, Anthasevashrama,
MALLADIHALLI P. O.. Southern Railway.

Sir,

Subject : Exemptions of donastions made to your Ashram, under section 15 B (1) of Indian Income-Tax Act 1922. Grant of request for........

REFERENCE :

YOUR LETTERS DATED 11-5-57, 16-5-57, and 21-9-57.

Donations made to Anathasevashrama. Malladihalli, will be exempt from Income Tax under section, 15 B (1) of, Indian Income Tax Act 1922, in the hands of the doners subject to the limits priscribed there in.

(Sd) Yours Faithfully,

For Commissioner of Income Tax, BANGALORE.

---

ವಿ. ಸೂ.—ಆಶ್ರಮದೊಡನೆ ಪತ್ರವ್ಯವಹಾರ ನಡೆಸುವವರು ಉತ್ತರಕ್ಕಾಗಿ ಅಂಚೆ ಚೀಟಿಯನ್ನು ಕಳುಹಿಸಬೇಕಾಗಿ ಕೋರಿದೆ.

ಆಶ್ರಮಕ್ಕೆ ಸಹಾಯ ಮಾಡಲಿಚ್ಛಿಸುವ ಮಹನೀಯರು ತಮ್ಮ ಉದಾರವಾದ ಸಹಾಯವನ್ನು "ಸೆಕ್ರೆಟರಿ, ಅನಾಥಸೇವಾಶ್ರಮ, ಮಲ್ಲಾಡಿಹಳ್ಳಿ" ಇವರ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

